कविकुलतिलक श्रीत्रिविक्रमपण्डिताचार्यसुत

श्रीमन्नारायणपण्डिताचार्य विरचिता

# मणिमञ्जरी

रायपल्लि राघवेन्द्राचार्य विरचित संस्कृत कन्नड व्याख्या सहिता

तथा

पूज्य बाळगारु श्रीनिवासाचार्य विरचितम्

# मणिमञ्जरीवैभवम्

( माणिक्यमञ्जरीखण्डनम् )



प्रकाशनम् : श्रीत्रैलोक्याचार्यसेवकवृन्दः, बेङ्गळूरु

श्रीमत् कविकुलतिलक त्रिविक्रमपण्डिताचार्यसुत

**श्रीनारायणपण्डिताचार्य**

विरचिता

# मणिमञ्जरी

मैसूरुमहाराजमहासंस्थानधर्माधिकारि

**श्रीरायपाळ्य राघवेन्द्राचार्य**

विरचित संस्कृत-कन्नड व्याख्यासहिता

**तथा**

परमपूज्य पण्डितराज श्रीजालीहाळ श्रीनिवासाचार्य शिष्य[illegible]र

**पूज्यश्रीबाळगारु श्रीनिवासाचार्यं**

विरचितं

# मणिमञ्जरीवैभवम्

माणिक्यमञ्जरीखण्डनात्मकम्

प्रकाशनं

**श्री त्रैलोक्याचार्यसेवकवृन्दः**

बेङ्गळूरु

**Manimanjari** of Sri Narayana Panditacharya with Sanskrit-Kannada Commentries by Sri Rayapalya Raghavendracharya & **Manimanjarivaibhavam** by Sri Balagaru Srinivasacharya



First Edition : 2003

Pages : 96 + 188 + 152

**Price : Rs. 150**

Published by :
**Sri Trilokyacharya Sevaka Vrinda**
Madhva Mandiram, 882, 13th Main
5th Cross, Hanumanthanagar,
Bangalore - 560 019.

Typeset (D.T.P.) by :
**Tulasi Impressions**
Bangalore - 78. ✆ 6646307.

Cover Page Design by : **Sheshagiri**

Printers :
**Adithya Printers**
Hanumanthanagar, Bangalore-19.

|| ಶ್ರೀ ಗುರುರಾಜೋ ವಿಜಯತೇ ||

# ಪ್ರಕಾಶಕರ ನುಡಿ

ಪರಮ ಪೂಜ್ಯ ಪಂಡಿತರಾಜ ಶ್ರೀ ಜಾಲಿಹಾಳ ಶ್ರೀನಿವಾಸಾಚಾರ್ಯರಿಂದ ಆಶೀರ್ವಾದ ಪಡೆದು ಶ್ರೀ ಪೂಜ್ಯ ಬಾಳಗಾರು ಶ್ರೀನಿವಾಸಾಚಾರ್ಯರ ಮಾರ್ಗದರ್ಶನದಲ್ಲಿ 1973ರಲ್ಲಿ ಆರಂಭಗೊಂಡು ಪ್ರವೃತ್ತವಾದ ಶ್ರೀ ತ್ರೈಲೋಕ್ಯಾಚಾರ್ಯಸೇವಕವೃಂದವು ಶ್ರೀ ಪೂಜ್ಯ ಆಚಾರ್ಯರು ಬರೆದ ಮತ್ತೊಂದು ಅದ್ವೈತ ವಿಮರ್ಶಾತ್ಮಕ ಕೃತಿಯನ್ನು ಪ್ರಕಾಶಿಸಲು ಪ್ರವೃತ್ತವಾಗಿದೆಯೆಂದು ತಿಳಿಸಲು ಪರಮಾನಂದವಾಗುತ್ತಿದೆ. ಇದು ನಮಗೆ ಹರಿ-ವಾಯು-ಗುರುಗಳು ಪರಮಾನುಗ್ರಹ ಮಾಡುವುದಕ್ಕೆ ದ್ಯೋತಕವಾಗಿದೆ. ಹಿಂದೆ 1977ರಲ್ಲಿ ಪೂಜ್ಯ ಜಾಲಿಹಾಳಾಚಾರ್ಯರು ಬರೆದ ಶ್ರೀ ವಿಜಯೀಂದ್ರವಿಜಯ ವೈಜಯಂತೀ ಎಂಬ ಗ್ರಂಥವನ್ನು ಮುದ್ರಿಸಿ ಖಂಡನ – ಮಂಡನ ಗ್ರಂಥಗಳ ಪ್ರಕಾಶನೆಗೆ ಪೂಜ್ಯ ಜಾಲಿಹಾಳಾಚಾರ್ಯರಿಂದ ದೀಕ್ಷೆ ಪಡೆದ, ಹಾಗೂ ಪೂಜ್ಯ ಶ್ರೀ ಬಾಳಗಾರು ಆಚಾರ್ಯರ ಮಾರ್ಗದರ್ಶನದಲ್ಲಿ ಸಾಧನತತ್ಪರವಾದ ಶ್ರೀ ತ್ರೈಲೋಕ್ಯಾಚಾರ್ಯಸೇವಕ ವೃಂದಕ್ಕೆ ಇವರೀರ್ವರ ಕರುಣೆ ತುಂಬಿರುವುದು ಇದೀಗ ಮತ್ತೊಮ್ಮೆ ಪ್ರಕಟವಾಗುತ್ತಿದೆ. ಈಗ್ಗೆ ಸುಮಾರು 10 ವರ್ಷಗಳ ಹಿಂದೆ 1993ರಲ್ಲಿ ಶ್ರೀ ಪೂಜ್ಯ ಆಚಾರ್ಯರು ರಚಿಸಿದ 'ಸಭಾಸಾರವೈಭವ' ಎಂಬ ಗ್ರಂಥವನ್ನು ಪ್ರಕಾಶಿಸುವ ಭಾಗ್ಯ ಒದಗಿಬಂತು. ಆ ಗ್ರಂಥದಿಂದ "ಅದ್ವೈತ ತತ್ವಪ್ರಕಾಶಿಕಾ" ಎಂಬ ದುರ್ವಾದದ ಖಂಡನೆಯಾಗಿ ಶ್ರೀ ಸತ್ಯಧ್ಯಾನತೀರ್ಥರ ಸಭಾಸಾರಸಂಗ್ರಹ ಗ್ರಂಥದ ಮಂಡನೆಯಾಗಿ, ಎಲ್ಲ ವಿಚಾರಪರ ಸಾತ್ವಿಕ ವರ್ಗ, ವಿಶೇಷವಾಗಿ ಮಾಧ್ವಜನಿತೆ ಪರಮಾನಂದಗೊಂಡಿತು. ಆನಂತರ 5 ವರ್ಷಗಳ ಬಳಿಕ "ಈಶಾನಸ್ತುತಿ" ಎಂಬ ದುಷ್ಟ ಗ್ರಂಥದಿಂದ ನೊಂದ ಮಾಧ್ವರಿಗೆ ಸಾಂತ್ವನ ಸಂತಸಗಳ ನೀಡುವಂತೆ ಪೂಜ್ಯ ಆಚಾರ್ಯರು ರಚಿಸಿದ ಶ್ರೀಮಾಧ್ವಸ್ತುತಿಯನ್ನು ನಾಕುವ್ಯಾಖ್ಯಾನ ಸಹಿತ ವಾಯುಸ್ತುತಿಯ ಸಹಿತವಾಗಿ ಪ್ರಕಾಶಿಸುವ ಭಾಗ್ಯ ಒದಗಿ ಬಂದಿತು. ಇದರಿಂದ ಈಶಾನಸ್ತುತಿ ಕಾರನಾದ ಅಹೋಬಲಪಂಡಿತನು ಎಂಥಾ ದುರ್ಬಲನೆಂದು ಎಲ್ಲರೂ ತಿಳಿಯುವಂತಾಯಿತು. ಹೀಗೆ ಮಾಧ್ವ ಸಿದ್ಧಾಂತ – ಚರಿತ್ರೆ ಇತ್ಯಾದಿಗಳಿಗೆ ಕಳಂಕ ತರಲು ಪರವಾದಿಗಳು ಪ್ರಯತ್ನಿಸಿದಾಗಲೆಲ್ಲ ನಮ್ಮ ಪೂಜ್ಯ ಆಚಾರ್ಯರು ಅದಕ್ಕೆ ತಕ್ಕ ಪ್ರತ್ಯುತ್ತರ ನೀಡಿದ ಮಹಾತ್ಮರು.

ಈಗ ಮತ್ತೊಮ್ಮೆ ಹಿಂದಿನ ಸನ್ನಿವೇಶ ಬಂದಿದೆ. ಮಾಧ್ವರ ಪವಿತ್ರ ಗ್ರಂಥಗಳಾದ ಸುಮಧ್ವವಿಜಯ – ಮಣಿಮಂಜರೀ ಇವುಗಳಿಗೆ ವಿಪರೀತವಾಗಿ ವಾದಿಸಲು ಹೊರಟ "ಮಾಣಿಕ್ಯ ಮಂಜರೀ" ಎಂಬ ಗ್ರಂಥ ಮುದ್ರಿತವಾಗಿ ಅಲ್ಲಿರುವ ವಿಚಾರಗಳನ್ನು ಕೇಳಿದಾಗ ಯಾವ ಮಾಧ್ವರು ನೊಂದದೇ ಇರಲು ಸಾಧ್ಯ? ಇದನ್ನು ಕಂಡು ಕೂಡಲೇ ನಮ್ಮ ಪೂಜ್ಯ ಆಚಾರ್ಯರು ಈ ಮಾಣಿಕ್ಯಮಂಜರಿಯನ್ನು ಖಂಡಿಸಿ ಶ್ರೀಹರಿ – ವಾಯುಗಳ ಮಹಿಮೆಯನ್ನು ಸಾರುವ ಶ್ರೀ ಮಣಿಮಂಜರೀ ವೈಭವವನ್ನು ರಚಿಸಲು ಆರಂಭಿಸಿದರು. ಈಚೆಗೆ ಕಳೆದ ವರ್ಷದ

ಮಧ್ವನವಮಿಗೆ ಹತ್ತು - ಹದಿನೈದು ದಿನಗಳ ಮುಂಚೆ ಈ ಮಾಣಿಕ್ಯ ಮಂಜರಿಯು ಪೂಜ್ಯ ಆಚಾರ್ಯರ ಕೈಗೆ ಸಿಕ್ಕಿತ್ತು. ಆ ಕೂಡಲೆ ಹಗಲು - ರಾತ್ರಿ ಎನ್ನದೆ ಇತರ ಕಾರ್ಯ ಒತ್ತಡದ ನಡುವೆಯೂ ಪೂಜ್ಯ ಆಚಾರ್ಯರು ಮಣಿಮಂಜರೀ ವೈಭವದ ರಚನೆಯನ್ನು ಮಾಡುತ್ತಿದ್ದರು. ಏಕೆ ಇದಕ್ಕೆ ಇಷ್ಟು ಅವಸರವೆಂದು ವಿಚಾರಿಸಿದಾಗ, ''ಹರಿ-ವಾಯುಗಳ ನಿಂದಿಸಿದ್ದನ್ನು ಕೇಳಿ ನೊಂದಿದ ಹೃದಯದಿಂದ ''ಹರಿಸರ್ವೋತ್ತಮ - ವಾಯು ಜೀವೋತ್ತಮ'' ಎಂದು ಕೂಗುತ್ತ ಮಧ್ವನವಮೀ ಉತ್ಸವ ಮಾಡಿದರೆ ಏನು ಫಲ? ಆದ್ದರಿಂದ ಮೊದಲು ಅದಕ್ಕೆ ಖಂಡನವಾದರೆ ಈ ಸಲದ ಮಧ್ವನವಮೀ ಉತ್ಸವ ಸಾರ್ಥಕ'' ಎಂದು ಪೂಜ್ಯ ಆಚಾರ್ಯರು ಹೇಳಿದಾಗ, ಇಂಥ ಆಚಾರ್ಯರನ್ನು ಪಡೆದ ನಾವೆಷ್ಟು ಧನ್ಯರೆಂದು ಭಾವನೆಯಾಯಿತು. ಅದರಂತೆಯೇ ಈ ಸಲದ ಮಧ್ವನವಮಿಯಲ್ಲಿ, ಮಾಣಿಕ್ಯಮಂಜರಿಯನ್ನು ಖಂಡಿಸುವ ಮಣಿಮಂಜರಿಯನ್ನು ಮಂಡಿಸುವ ಮಣಿಮಂಜರೀ ವೈಭವಗ್ರಂಥದ ಹಸ್ತಪ್ರತಿಯನ್ನು ಮಧ್ವರಾಯರ ಭಾವಚಿತ್ರದೊಡನೆ ನಡೆವ ರಥೋತ್ಸವದಲ್ಲಿ ಅಲಂಕರಿಸಿಟ್ಟು ವಿಜೃಂಭಣೆಯಿಂದ ಮಧ್ವನವಮೀ ಉತ್ಸವವನ್ನು ಪೂಜ್ಯ ಆಚಾರ್ಯರು ನೆರವೇರಿಸಿದರು. ಹೀಗೆ 'ಮಣಿಮಂಜರೀವೈಭವ' ಗ್ರಂಥವು ರಚನೆಯಾಗಿ ವರ್ಷ ಸಮೀಪಿಸುತ್ತಿದ್ದರೂ ಸಹ ಅದನ್ನು ಪ್ರಕಾಶಿಸಲು ವಿಳಂಬವಾಗಲು ಅನೇಕ ಕಾರಣಗಳಿವೆ. ಆರ್ಥಿಕ ಅನುಕೂಲ್ಯಾದಿಗಳು ಉಂಟಾಗುವವರೆಗೆ ಇದರ ಮುದ್ರಣ ವಿಲಂಬವಾಯಿತಷ್ಟೆ ಆದರೆ ಈಗ ಶ್ರೀಹರಿವಾಯುಗುರುಗಳ ಅನುಗ್ರಹದಿಂದ ಎಲ್ಲ ಸೌಕರ್ಯವು ಇರುವುದರಿಂದ ಇದನ್ನು ಮುದ್ರಿಸಲು ಪ್ರಾರ್ಥಿಸಿದಾಗ, ಪೂಜ್ಯ ಆಚಾರ್ಯರು ಪರಮಾನುಗ್ರಹಮಾಡಿ, ಇದನ್ನಷ್ಟೇ ಅಲ್ಲದೆ ಮಣಿಮಂಜರಿಯನ್ನೂ ಪ್ರಕಾಶಿಸಲು ನಿರ್ದೇಶಿಸಿದರು. ಆ ಮಣಿಮಂಜರಿಯ ವ್ಯಾಖ್ಯಾನವೂ ಪ್ರಕಾಶಿತವಾಗಬೇಕೆಂದು ಬಯಸಿದರು. ಕೇವಲ ತಮ್ಮ ಗ್ರಂಥವೊಂದನ್ನು ಪ್ರಕಾಶಿಸುವುದಕ್ಕಿಂತ ಪ್ರಾಚೀನರ ಗ್ರಂಥವನ್ನೂ ಮುಂದಾಗಿ ಇಟ್ಟು, ಅದರ ಹಿಂದೆ ತಮ್ಮ ಗ್ರಂಥವಿರಲೆಂದು ತಿಳಿಸಿದರು. ಇದು ಆಚಾರ್ಯರಿಗೆ ಪ್ರಾಚೀನರಲ್ಲಿರುವ ಗೌರವ ದ್ಯೋತಕವಾಗಿತ್ತು.

ಆಗ ಹೇಗೆ ಈ ಗ್ರಂಥ ಪ್ರಕಾಶನೆಯು ಗುರಿಸಾಧಿಸುವುದೆಂದು ಚಿಂತಿಸುತ್ತ ಪೂಜ್ಯ ಆಚಾರ್ಯರಲ್ಲಿ ನಿವೇದಿಸಿದಾಗ, ಪೂಜ್ಯ ಆಚಾರ್ಯರು ತಮ್ಮ ಪುತ್ರರಾದ, ಹಾಗೂ ನಮಗೆಲ್ಲ ಮಧ್ವವಿಜಯಾದಿಗಳನ್ನು ಹೇಳಿಕೊಟ್ಟು ಅನುಗ್ರಹಿಸಿದ ಶ್ರೀ ರುಚಿರಾಚಾರ್ಯರಿಗೆ ಇದನ್ನು ನಿರ್ವಹಿಸಲು ತಿಳಿಸಿದರು. ಅದರಂತೆ ಈಗ ಈ ಗ್ರಂಥ ಶ್ರೀ ರಾಯಪಳ್ಳಿ ರಾಘವೇಂದ್ರಾಚಾರ್ಯರ ವ್ಯಾಖ್ಯಾನಸಹಿತ ಮಣಿಮಂಜರಿಯೊಡನೆ ಮುದ್ರಿತವಾಗಿ ಹೊರಬರುತ್ತಿದೆ.

.ಪಂಡಿತ ಪ್ರಕಾಂಡ ಶ್ರೀರಾಯಪಳ್ಳಿ (ಪುಂಗನೂರು) ರಾಘವೇಂದ್ರಾಚಾರ್ಯರು ಮಣಿಮಂಜರಿಯ ಪ್ರಾಮಾಣಿಕತೆಯನ್ನು ಸಮರ್ಥಿಸಿದ್ದ ಧೀರ ಪುರುಷರು. ಅವರು ಸಂಸ್ಕೃತ-ಕನ್ನಡ ಎರಡೂ ಭಾಷೆಯಲ್ಲಿ ಮಣಿಮಂಜರಿಯ ಅರ್ಥವನ್ನು ತಿಳಿಸಿದ್ದು ಬಹಳ ಸೊಗಸಾಗಿದೆ. ಆದ್ದರಿಂದ ಅದನ್ನೇ ಪ್ರಕಾಶಿಸಲು ಪೂಜ್ಯ ಆಚಾರ್ಯರು ನಿರ್ದೇಶಿಸಿದಂತೆ ಈ ಗ್ರಂಥ ರೂಪಗೊಂಡಿದೆ. ಜೊತೆಗೆ ಕನ್ನಡದಲ್ಲಿ ಈ ಗ್ರಂಥದ ವಿಚಾರವೂ ಬೇಕೆಂಬ ನಮ್ಮ ಅಪೇಕ್ಷೆಗೆ

ಶ್ರೀ ರುಚಿರಾಚಾರ್ಯರು ಬಹು ಸುಂದರವಾಗಿ ಅಧ್ಯಯನಾತ್ಮಕ ಲೇಖನವನ್ನು ಬರೆದು ಅನುಗ್ರಹಿಸಿರುತ್ತಾರೆ.

ಶ್ರೀಮತ್ ಅಕ್ಷೋಭ್ಯತೀರ್ಥರು ವಿದ್ಯಾರಣ್ಯನನ್ನು ಸೋಲಿಸಿದ ಘಟನೆಯನ್ನು ಅಪಲಾಪ ಮಾಡುವ ಹಾಗೂ ಅದಕ್ಕೆ ವಿಪರೀತವಾಗಿ ಹೇಳುವ ಈ ಮಾಣಿಕ್ಯಮಂಜರೀ ಖಂಡನೆಯನ್ನು ಶ್ರೀ ಅಕ್ಷೋಭ್ಯತೀರ್ಥರ ಆರಾಧನೆಯ ಉತ್ಸವದಲ್ಲೇ ಪ್ರಕಾಶಿಸುವ ಸಂಕಲ್ಪವಾಯಿತು. ಅದೂ ಧಾರವಾಡದಲ್ಲಿ ಆಗಬೇಕೆಂದು ಪೂಜ್ಯ ಆಚಾರ್ಯರು ಬಯಸಿದ್ದರು. ಧಾರವಾಡದಲ್ಲೇ ನೆಲೆಸಿದ್ದ ಪೂಜ್ಯ ಆಚಾರ್ಯರ ಗುರುಗಳಾದ ಪರಮ ಪೂಜ್ಯ ಶ್ರೀ ಜಾಲಿಹಾಳ ಶ್ರೀನಿವಾಸಚಾರ್ಯರು ಇರುವವರೆಗೆ ಈ ತರಹದ ಮಾಧ್ವ ಅವಹೇಳನ ಗ್ರಂಥವು ಬರುತ್ತಿರಲಿಲ್ಲ. ಈಗ 'ಅದ್ವೈತ ತತ್ವಪ್ರಕಾಶಿಕಾ' 'ಈಶಾನ ಸ್ತುತಿ' 'ಮಾಣಿಕ್ಯಮಂಜರೀ' ಎಂಬ ಮೂರು ಗ್ರಂಥಗಳು ಅಲ್ಲಿ ಬಂದುದನ್ನು ಕಂಡು, ಯಾವ ಸ್ಥಳದಲ್ಲಿ ಮಧ್ವರಾಯರನ್ನು ಬೈದ ಗ್ರಂಥವನ್ನು ಮೆರವಣಿಗೆ ಮಾಡಿರುವರೋ, ಅದು ನಮ್ಮ ಪೂಜ್ಯ ಗುರುಗಳ ಕ್ಷೇತ್ರವಾದ್ದರಿಂದ ನಾವೂ ಅಲ್ಲಿಯೇ ಈ ಮಾಣಿಕ್ಯಮಂಜರೀಖಂಡನವಾದ ಮಣಿಮಂಜರೀವೈಭವವನ್ನು ಮೆರವಣಿಗೆ ಉತ್ಸವಾದಿ ಸಂಭ್ರಮದಿಂದ ನೆರವೇರಿಸುವುದು ನಮ್ಮ ಗುರುಗಳ ಅನುಗ್ರಹಕ್ಕೆ ಸಾಧನವೆಂದು ತಿಳಿಸಿದರು. ಪೂಜ್ಯ ಆಚಾರ್ಯರ ಕ್ಷೇತ್ರದತ್ತ ಯಾತ್ರೆ ಮಾಡವ ಸೌಭಾಗ್ಯವೂ ಇದ್ದುದರಿಂದ ಇದು ನಮಗೂ ಪರಮಾನಂದದ ಸಂಗತಿಯಾಗಿತ್ತು. ಆದರೆ ಆ ಪರಸ್ಥಳದಲ್ಲಿ ಈ ಗ್ರಂಥ ಪ್ರಕಾಶನ ಹೇಗೆ ಸುಲಲಿತವಾದೀತೆಂದು ವಿಚಾರವುಂಟಾದಾಗ, ಶ್ರೀ ಪೂಜ್ಯ ಜಾಲಿಹಾಳ ಆಚಾರ್ಯರ ಪುತ್ರರಾದ ಶ್ರೀ ಸೇತುರಾಮಾಚಾರ್ಯರ ಸಲಹೆಯಂತೆ ಧಾರವಾಡದ ಶ್ರೀ ವನವಾಸೀ ರಾಮಮಂದಿರದಲ್ಲಿ ಅಲ್ಲಿರುವ ಹರಿ-ಗುರುಭಕ್ತರ ಸಹಕಾರದಿಂದ ಈ ಪ್ರಕಾಶನ ಮಹೋತ್ಸವ ಸಾಕಾರಗೊಳ್ಳುತ್ತಿದೆಯೆಂದು ಸಂತಸದಿಂದ ತಿಳಿಸುತ್ತಿದ್ದೇವೆ.

## ಕೃತಜ್ಞತೆಗಳು

ಈ ಗ್ರಂಥಪ್ರಕಾಶನ ಸಮಾರಂಭಕ್ಕೆ ಮೂಲ ಆಧಾರಸ್ತಂಭರೆಂದರೆ, ಗ್ರಂಥಕಾರರಾದ ಪರಮಪೂಜ್ಯ ಗುರುಗಳಾದ ಶ್ರೀ ಬಾಳಗಾರು ಶ್ರೀನಿವಾಸಾಚಾರ್ಯರು ಪೂಜ್ಯ ಆಚಾರ್ಯರ ಆಶೀರ್ವಾದದ ಫಲವಾಗಿಯೇ, ಮಾಧ್ವರಿಗೆಲ್ಲ ಹೆಮ್ಮೆಯ ವಿಷಯವಾದ ಈ ಗ್ರಂಥಪ್ರಕಾಶನ ಉತ್ಸವದಲ್ಲಿ ಶ್ರೀ ತ್ರೈಲೋಕ್ಯಾಚಾರ್ಯಸೇವಕವೃಂದ ಸಕ್ರಿಯವಾಗಿ ಭಾಗವಹಿಸುವ ಭಾಗ್ಯ ಒದಗಿ ಬಂದಿದೆಯಷ್ಟೆ ಇಂಥಾ ಆಚಾರ್ಯರನ್ನು ನಮಗೆ ಮಾರ್ಗದರ್ಶಕರನ್ನಾಗಿ ಕರುಣೆ ಮಾಡಿ ಅನುಗ್ರಹಿಸಿದ ಪೂಜ್ಯ ಆಚಾರ್ಯರ ಗುರುಗಳಾದ ಪಂಡಿತರಾಜ ಶ್ರೀಜಾಲಿಹಾಳ ಶ್ರೀನಿವಾಸಾಚಾರ್ಯರಿಗೆ ಸೇವಕವೃಂದ ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತದೆ. ಅಂತೆಯೇ ಪೂಜ್ಯ ಬಾಳಗಾರು ಆಚಾರ್ಯರ ಅಡಿದಾವರೆಗೆ ಅನಂತ ಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸಿ, ಹೀಗೆಯೇ ಉತ್ತರೋತ್ತರದಲ್ಲಿಯೂ ಶ್ರೀ ಹರಿವಾಯು ಗುರುಗಳ ಸೇವೆಯನ್ನು ಮಾಡುವ ಭಾಗ್ಯ ಈ ಸೇವಕವೃಂದಕ್ಕೆ ಉಂಟಾಗಲೆಂದು ಆಶೀರ್ವದಿಸಲು ಪ್ರಾರ್ಥಿಸುತ್ತೇವೆ.

ಇದರಂತೆ ಈ 'ಮಣಿಮಂಜರೀವೈಭವ' ಗ್ರಂಥದ ಸಾರಸಂಗ್ರಹ ರೂಪ ಲೇಖನ ಬರೆದು, ಮುದ್ರಣದ ಪ್ರತಿಹಂತವನ್ನೂ ನಿರ್ವಹಿಸಿದ ಪೂಜ್ಯ ಆಚಾರ್ಯಪುತ್ರರಾದ ಶ್ರೀ ರುಚಿರಾ ಚಾರ್ಯರಿಗೆ ಅನೇಕ ಪ್ರಣಾಮಗಳು. ಅಂತೆಯೇ ಪೂಜ್ಯ ಆಚಾರ್ಯರ ಪುತ್ರರಾದ ಶ್ರೀ ರೋಚನಾಚಾರ್ಯರಿಗೆ, ಶಿಷ್ಯರಾದ ಶ್ರೀ ಜಾಲಿಹಾಳ ಸುಕೇಶಾಚಾರ್ಯರಿಗೆ, ಹೊಳಲುಗುಂದ ಜಯತೀರ್ಥಾಚಾರ್ಯ, ಕಣೇಕಲ್ ಶ್ರೀಕಾಂತಾಚಾರ್ಯ ಇವರಿಗೆಲ್ಲ ಕೃತಜ್ಞತಾಪೂರ್ವಕ ನಮಸ್ಕಾರಗಳು. ಹಗಲು – ರಾತ್ರಿ ಅನ್ನ-ನಿದ್ದೆಗಳನ್ನು ತೊರೆದು ಈ ಪುಸ್ತಕದ ಮುದ್ರಣವು ಸಕಾಲಕ್ಕೆ ಉಂಟಾಗಲು ಇವರೆಲ್ಲರೂ ಮಾಡಿರುವ ಪರಿಶ್ರಮ ಅನನ್ಯವಾಗಿದೆ.

ಮಣಿಮಂಜರೀ ವೈಭವದೊಡನೆ ಪೂರ್ವದಲ್ಲಿ ಈ ಗ್ರಂಥಕ್ಕೆ ಶೋಭೆಯಾಗಲೆಂದು ಹಾಗೂ ಈ ಗ್ರಂಥದ ಉಪಯೋಗ ಅಧಿಕವಾಗಲೆಂದು, ಶ್ರೀ ರಾಯಪಳ್ಳಿ ರಾಘವೇಂದ್ರಾ ಚಾರ್ಯರು ಮುದ್ರಿಸಿದ ವ್ಯಾಖ್ಯಾನಸಹಿತ ಮಣಿಮಂಜರಿಯನ್ನು ಇಲ್ಲಿ ಮುದ್ರಿಸಲು ಅನುಮತಿಸಿದ ಶ್ರೀ ರಾಯಪಳ್ಳಿ ಆಚಾರ್ಯರ ಪೌತ್ರರಾದ ಶ್ರೀವಿಜಯೀಂದ್ರಾಚಾರ್ಯರಿಗೆ ಹಾಗೂ ಶ್ರೀ ರಾಯಪಳ್ಳಿ ಆಚಾರ್ಯರ ಪರಿಚಯ ತಿಳಿಸಿದ ಗೋಪೀನಾಥ್ ರಾಯರಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ಈ ಗ್ರಂಥದ ರಚನಾವಸರದಲ್ಲಿ ಪೂಜ್ಯ ಆಚಾರ್ಯರು ಬಯಸುವ ಅನೇಕ ಗ್ರಂಥಗಳನ್ನು ಒದಗಿಸುತ್ತಿದ್ದ ಪೂಜ್ಯ ಆಚಾರ್ಯರ ಶಿಷ್ಯರಾದ ಶ್ರೀ ಮಾಧವರಾವ್ ಅವರನ್ನೂ ಇಲ್ಲಿ ಸ್ಮರಿಸುವುದು ಕರ್ತವ್ಯವಾಗಿದೆ. ಇದರಂತೆ ಸಕ್ರಿಯವಾಗಿ ಭಾಗವಹಿಸುವ ಎಲ್ಲ ಹರಿಭಕ್ತರಿಗೆ ಕೃತಜ್ಞತಾಪೂರ್ವಕ ವಂದನೆಗಳು.

ಇದಲ್ಲದೆ ಈ ಗ್ರಂಥಪ್ರಕಾಶನಕ್ಕೆ ಆರ್ಥಿಕವಾಗಿ ಸೇವೆ ಸಲ್ಲಿಸಿದ ಮಹನೀಯರನ್ನು ಇಲ್ಲಿ ನೆನೆಯುವುದು ಕರ್ತವ್ಯವಾಗಿದೆ.

| | | |
|---|---|---|
| 1. | ಮಾತಾಪಿತೃಸ್ಮರಣಾರ್ಥವಾಗಿ ಹೆಬ್ಬಾಳ್ ನಾಗರಾಜಾಚಾರ್ | 20.000 |
| 2. | ಕೆ.ವಿ. ವೆಂಕಟೇಶಯ್ಯ | 10.000 |
| 3. | ಶ್ರೀ ಲಕ್ಷ್ಮೀನಾರಾಯಣರಾಯರು | 10.000 |
| 4. | ಅನಂತಸ್ವಾಮಿ | 10.000 |
| 5. | ಚಿಂಚೋಳಿ ಬದರೀನಾಥ | 5.000 |
| 6. | ಪ್ರಸನ್ನಾಚಾರ್ ಮಾನವಿ | 5.000 |
| 7. | ಶ್ರೀ ಆಚಾರ್ಯ ವಿದ್ಯಾಧಿಷ್ಠಾನಂ | 5.000 |
| 8. | ಕೃಷ್ಣಮೂರ್ತಿ | 5.000 |
| 9. | ನಾರಾಯಣರಾವ್, ಬಳ್ಳಾರಿ | 5.000 |
| 10. | ಗುರುಪ್ರಸಾದ್, ಉಡುಪಿ | 2.000 |
| 11. | ಕಾಶೀ ರಮೇಶ್ | 2.000 |

ಹೀಗೆ ಈ ಗ್ರಂಥದ ಮುದ್ರಣಕ್ಕೆ ನೆರವಾದ ಈ ಹರಿ-ಗುರುಭಕ್ತರಿಗೆ ಕೃತಜ್ಞತಾ ಪೂರ್ವಕ ಅನೇಕ ವಂದನೆಗಳು. ಇದರಂತೆ ಈ ಗ್ರಂಥದ ಪ್ರಕಾಶನ ಮಹೋತ್ಸವಕ್ಕೆ ಆರ್ಥಿಕವಾಗಿ ಸೇವೆ ಮಾಡಿರುವ ಎಲ್ಲ ಹರಿ-ಗುರುಭಕ್ತರಿಗೂ ವಂದನೆಗಳು.

ಇದಲ್ಲದೆ, ಧಾರವಾಡದಲ್ಲಿ ಈ ಗ್ರಂಥದ ಪ್ರಕಾಶನೋತ್ಸವ ಸಮಾರಂಭವನ್ನು ಹಮ್ಮಿಕೊಂಡು ಶ್ರೀ ಹರಿ-ವಾಯು-ಗುರುಗಳ ವಿಶೇಷ ಸೇವೆ ಮಾಡುತ್ತಿರುವ, ಅದಕ್ಕೆ ತನು-ಮನ-ಧನಗಳಿಂದ ಉತ್ಸಾಹಪೂರ್ಣವಾಗಿ ಭಾಗವಹಿಸುವ ಧಾರವಾಡದ ಅಶೇಷ ವೈದಿಕ-ಲೌಕಿಕ ಸಾತ್ವಿಕ ಜನರಿಗೆ ಕೃತಜ್ಞತಾಪೂರ್ವಕ ವಂದನೆಗಳು. ಅದರಲ್ಲಿ ವಿಶೇಷತಃ ಈ ಉತ್ಸವದಲ್ಲಿ ಅಧ್ಯಕ್ಷರಾಗಿ ಭಾಗವಹಿಸಿದ ಶ್ರೀ ಪಂಡಿತಪ್ರಕಾಂಡ ಶ್ರೀ ಗಂಗೂರು ರಾಘವೇಂದ್ರಾಚಾರ್ಯರಿಗೆ, ಈ ಉತ್ಸವದ ಆಯೋಜನೆಗಾಗಿ ಹಗಲಿರುಳೂ ಶ್ರಮವಹಿಸಿ ಯಶಸ್ವಿಗೆ ಕಾರಣರಾದ ಪೂಜ್ಯ ಜಾಲಿಹಾಳಾಚಾರ್ಯರ ಮಕ್ಕಳಾದ ಶ್ರೀ ಸೇತೂರಾಮಾಚಾರ್ಯರಿಗೆ, ಶ್ರೀ ಜಾಲಿಹಾಳ ಗೋಪಾಲಕೃಷ್ಣಾಚಾರ್ಯರಿಗೆ ಬಾಗಲಕೋಟೆ ರಾಮಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳು.

ಇದರಂತೆ, ಶ್ರೀ ವನವಾಸೀ ರಾಮಮಂದಿರದಲ್ಲಿ ಈ ಉತ್ಸವವನ್ನು ನಡೆಸಲು ಉತ್ಸಾಹದಿಂದ ಪ್ರವೃತ್ತರಾದ ಶ್ರೀ ವನವಾಸೀರಾಮಮಂದಿರ ವಿಶ್ವಸ್ಥ ಮಂಡಳಿಗೆ ಶ್ರೀ ಸೇವಕವೃಂದದ ಕೃತಜ್ಞತಾ ಪೂರ್ವಕ ವಂದನೆಗಳು. ಇದಲ್ಲದೆ, ಈ ಉತ್ಸವದ ಬಗ್ಗೆ ವಿಶೇಷ ಆಸಕ್ತಿವಹಿಸಿರುವ ಶ್ರೀ ಕೆ.ಎಸ್. ಉಪಾಧ್ಯೆ, ಶ್ರೀ ನವಲಗುಂದ ಗೋವಿಂದರಾವ್, ಶ್ರೀ ಶ್ರೀನಿವಾಸರಾವ್, ಗದಕ್ಕರ್, ಶ್ರೀ ಉದ್ಧವ, ಗದಕ್ಕರ್, ಶ್ರೀ ಅಶೋಕ, ಚಚಡಿ, ಶ್ರೀ ಅಶೋಕ, ಹುದ್ದಾರ್, ಶ್ರೀ ಡಾ ವಿ.ಆರ್. ದೇಸಾಯಿ, ಶ್ರೀ ಪ್ರ. ಪಂಢರೀ, ಶ್ರೀ ದಾಮೋದರಾಚಾರ್, ಗುಡಿ, ಶ್ರೀ ತಿಮ್ಮಣ್ಣಾಚಾರ್, ಗುಡಿ, ಶ್ರೀ ಬದರೀಶಾಚಾರ್, ಗುಡಿ, ಶ್ರೀ ಮಾಧವ, ಗುಡಿ, ಶ್ರೀ ರಾಘವೇಂದ್ರ, ಗುಡಿ ಇತ್ಯಾದಿ ಧಾರವಾಡದ ಸಕಲ ಆಸ್ತಿಕ ವರ್ಗಕ್ಕೆ ಶ್ರೀ ಸೇವಕವೃಂದದ ಕೃತಜ್ಞತೆಗಳು.

ಈ ಗ್ರಂಥದ ಮುದ್ರಣದ ಡಿ.ಟಿ.ಪಿ. ಕಾರ್ಯವನ್ನು ಸುಂದರವಾಗಿ ನಿರ್ವಹಿಸಿದ 'ತುಳಸೀ ಇಂಪ್ರೆಷನ್ಸ್' ಹಾಗು ಸಕಾಲಕ್ಕೆ ತೃಪ್ತಿಕರವಾಗಿ ಮುದ್ರಣಮಾಡಿದ 'ಆದಿತ್ಯ ಪ್ರಿಂಟರ್ಸ್' ಸಂಸ್ಥೆಗೆ, ಹಾಗೂ ಮುಖಪುಟ ವಿನ್ಯಾಸ ಮಾಡಿದ ಶ್ರೀ ಶೇಷಗಿರಿ ಅವರಿಗೂ ಧನ್ಯವಾದಗಳು.

ಈ ಗ್ರಂಥಪ್ರಕಾಶನದ ಸದುಪಯೋಗವನ್ನು ಎಲ್ಲ ಸಜ್ಜನರೂ ಪಡೆಯಲೆಂದು ಆಶಿಸುತ್ತ, ಈ ಗ್ರಂಥಪ್ರಕಾಶನ ರೂಪ ಸತ್ಕರ್ಮದಿಂದ ಶ್ರೀ ಹರಿ-ವಾಯು-ಗುರುಗಳು ಸುಪ್ರೀತರಾಗಲೆಂದು ಪ್ರಾರ್ಥಿಸುತ್ತೇವೆ.

ಅಕ್ಷೋಭ್ಯತೀರ್ಥರ ಆರಾಧನಾ
ಮಾರ್ಗ - ಕೃಷ್ಣ - ಪಂಚಮೀ
14-12-2003

ದ್ವಾರಕಾನಾಥ್
**ಶ್ರೀ ತ್ರೈಲೋಕಾಚಾರ್ಯರಸೇವಕವೃಂದದ**
**ಪರವಾಗಿ**

ಇದರಂತೆ ಈ 'ಮಣಿಮಂಜರೀವೈಭವ' ಗ್ರಂಥದ ಸಾರಸಂಗ್ರಹ ರೂಪ ಲೇಖನ ಬರೆದು, ಮುದ್ರಣದ ಪ್ರತಿಹಂತವನ್ನೂ ನಿರ್ವಹಿಸಿದ ಪೂಜ್ಯ ಆಚಾರ್ಯಪುತ್ರರಾದ ಶ್ರೀ ರುಚಿರಾಚಾರ್ಯರಿಗೆ ಅನೇಕ ಪ್ರಣಾಮಗಳು. ಅಂತೆಯೇ ಪೂಜ್ಯ ಆಚಾರ್ಯರ ಪುತ್ರರಾದ ಶ್ರೀ ರೋಚನಾಚಾರ್ಯರಿಗೆ, ಶಿಷ್ಯರಾದ ಶ್ರೀ ಜಾಲಿಹಾಳ ಸುಕೇಶಾಚಾರ್ಯರಿಗೆ, ಹೊಳಲುಗುಂದ ಜಯತೀರ್ಥಾಚಾರ್ಯ, ಕಣೇಕಲ್ ಶ್ರೀಕಾಂತಾಚಾರ್ಯ ಇವರಿಗೆಲ್ಲ ಕೃತಜ್ಞತಾಪೂರ್ವಕ ನಮಸ್ಕಾರಗಳು. ಹಗಲು – ರಾತ್ರಿ ಅನ್ನ-ನಿದ್ದೆಗಳನ್ನು ತೊರೆದು ಈ ಪುಸ್ತಕದ ಮುದ್ರಣವು ಸಕಾಲಕ್ಕೆ ಉಂಟಾಗಲು ಇವರೆಲ್ಲರೂ ಮಾಡಿರುವ ಪರಿಶ್ರಮ ಅನನ್ಯವಾಗಿದೆ.

ಮಣಿಮಂಜರೀ ವೈಭವದೊಡನೆ ಪೂರ್ವದಲ್ಲಿ ಈ ಗ್ರಂಥಕ್ಕೆ ಶೋಭೆಯಾಗಲೆಂದು ಹಾಗೂ ಈ ಗ್ರಂಥದ ಉಪಯೋಗ ಅಧಿಕವಾಗಲೆಂದು, ಶ್ರೀ ರಾಯಪಳ್ಳಿ ರಾಘವೇಂದ್ರಾಚಾರ್ಯರು ಮುದ್ರಿಸಿದ ವ್ಯಾಖ್ಯಾನಸಹಿತ ಮಣಿಮಂಜರಿಯನ್ನು ಇಲ್ಲಿ ಮುದ್ರಿಸಲು ಅನುಮತಿಸಿದ ಶ್ರೀ ರಾಯಪಳ್ಳಿ ಆಚಾರ್ಯರ ಪೌತ್ರರಾದ ಶ್ರೀವಿಜಯೀಂದ್ರಾಚಾರ್ಯರಿಗೆ ಹಾಗೂ ಶ್ರೀ ರಾಯಪಳ್ಳಿ ಆಚಾರ್ಯರ ಪರಿಚಯ ತಿಳಿಸಿದ ಗೋಪೀನಾಥ್ ರಾಯರಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ಈ ಗ್ರಂಥದ ರಚನಾವಸರದಲ್ಲಿ ಪೂಜ್ಯ ಆಚಾರ್ಯರು ಬಯಸುವ ಅನೇಕ ಗ್ರಂಥಗಳನ್ನು ಒದಗಿಸುತ್ತಿದ್ದ ಪೂಜ್ಯ ಆಚಾರ್ಯರ ಶಿಷ್ಯರಾದ ಶ್ರೀ ಮಾಧವರಾವ್ ಅವರನ್ನೂ ಇಲ್ಲಿ ಸ್ಮರಿಸುವುದು ಕರ್ತವ್ಯವಾಗಿದೆ. ಇದರಂತೆ ಸಕ್ರಿಯವಾಗಿ ಭಾಗವಹಿಸುವ ಎಲ್ಲ ಹರಿಭಕ್ತರಿಗೆ ಕೃತಜ್ಞತಾಪೂರ್ವಕ ವಂದನೆಗಳು.

ಇದಲ್ಲದೆ ಈ ಗ್ರಂಥಪ್ರಕಾಶನಕ್ಕೆ ಆರ್ಥಿಕವಾಗಿ ಸೇವೆ ಸಲ್ಲಿಸಿದ ಮಹನೀಯರನ್ನು ಇಲ್ಲಿ ನೆನೆಯುವುದು ಕರ್ತವ್ಯವಾಗಿದೆ.

| | | |
|---|---|---|
| 1. | ಮಾತಾಪಿತೃಸ್ಮರಣಾರ್ಥವಾಗಿ ಹೆಬ್ಬಾಳ್ ನಾಗರಾಜಾಚಾರ್ | 20.000 |
| 2. | ಕೆ.ವಿ. ವೆಂಕಟೇಶಯ್ಯ | 10.000 |
| 3. | ಶ್ರೀ ಲಕ್ಷ್ಮೀನಾರಾಯಣರಾಯರು | 10.000 |
| 4. | ಅನಂತಸ್ವಾಮಿ | 10.000 |
| 5. | ಚಿಂಚೋಳಿ ಬದರೀನಾಥ | 5.000 |
| 6. | ಪ್ರಸನ್ನಾಚಾರ್ ಮಾನವಿ | 5.000 |
| 7. | ಶ್ರೀ ಆಚಾರ್ಯ ವಿದ್ಯಾಧಿಷ್ಠಾನಂ | 5.000 |
| 8. | ಕೃಷ್ಣಮೂರ್ತಿ | 5.000 |
| 9. | ನಾರಾಯಣರಾವ್, ಬಳ್ಳಾರಿ | 5.000 |
| 10. | ಗುರುಪ್ರಸಾದ್, ಉಡುಪಿ | 2.000 |
| 11. | ಕಾಶೀ ರಮೇಶ್ | 2.000 |

ಹೀಗೆ ಈ ಗ್ರಂಥದ ಮುದ್ರಣಕ್ಕೆ ನೆರವಾದ ಈ ಹರಿ-ಗುರುಭಕ್ತರಿಗೆ ಕೃತಜ್ಞತಾ ಪೂರ್ವಕ ಅನೇಕ ವಂದನೆಗಳು. ಇದರಂತೆ ಈ ಗ್ರಂಥದ ಪ್ರಕಾಶನ ಮಹೋತ್ಸವಕ್ಕೆ ಆರ್ಥಿಕವಾಗಿ ಸೇವೆ ಮಾಡಿರುವ ಎಲ್ಲ ಹರಿ-ಗುರುಭಕ್ತರಿಗೂ ವಂದನೆಗಳು.

ಇದಲ್ಲದೆ, ಧಾರವಾಡದಲ್ಲಿ ಈ ಗ್ರಂಥದ ಪ್ರಕಾಶನೋತ್ಸವ ಸಮಾರಂಭವನ್ನು ಹಮ್ಮಿ ಕೊಂಡು ಶ್ರೀ ಹರಿ-ವಾಯು-ಗುರುಗಳ ವಿಶೇಷ ಸೇವೆ ಮಾಡುತ್ತಿರುವ, ಅದಕ್ಕೆ ತನು-ಮನ-ಧನಗಳಿಂದ ಉತ್ಸಾಹಪೂರ್ಣವಾಗಿ ಭಾಗವಹಿಸುವ ಧಾರವಾಡದ ಅಶೇಷ ವೈದಿಕ-ಲೌಕಿಕ ಸಾತ್ವಿಕ ಜನರಿಗೆ ಕೃತಜ್ಞತಾಪೂರ್ವಕ ವಂದನೆಗಳು. ಅದರಲ್ಲಿ ವಿಶೇಷತಃ ಈ ಉತ್ಸವದಲ್ಲಿ ಅಧ್ಯಕ್ಷರಾಗಿ ಭಾಗವಹಿಸಿದ ಶ್ರೀ ಪಂಡಿತಪ್ರಕಾಂಡ ಶ್ರೀ ಗಂಗೂರು ರಾಘವೇಂದ್ರಾಚಾರ್ಯರಿಗೆ, ಈ ಉತ್ಸವದ ಆಯೋಜನೆಗಾಗಿ ಹಗಲಿರುಳೂ ಶ್ರಮವಹಿಸಿ ಯಶಸ್ವಿಗೆ ಕಾರಣರಾದ ಪೂಜ್ಯ ಜಾಲಿಹಾಳಾಚಾರ್ಯರ ಮಕ್ಕಳಾದ ಶ್ರೀ ಸೇತೂರಾಮಾಚಾರ್ಯರಿಗೆ, ಶ್ರೀ ಜಾಲಿಹಾಳ ಗೋಪಾಲಕೃಷ್ಣಾಚಾರ್ಯರಿಗೆ ಬಾಗಲಕೋಟೆ ರಾಮಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳು.

ಇದರಂತೆ, ಶ್ರೀ ವನವಾಸೀ ರಾಮಮಂದಿರದಲ್ಲಿ ಈ ಉತ್ಸವವನ್ನು ನಡೆಸಲು ಉತ್ಸಾಹ ದಿಂದ ಪ್ರವೃತ್ತರಾದ ಶ್ರೀ ವನವಾಸೀರಾಮಮಂದಿರ ವಿಶ್ವಸ್ಥ ಮಂಡಳಿಗೆ ಶ್ರೀ ಸೇವಕವೃಂದದ ಕೃತಜ್ಞತಾ ಪೂರ್ವಕ ವಂದನೆಗಳು. ಇದಲ್ಲದೆ, ಈ ಉತ್ಸವದ ಬಗ್ಗೆ ವಿಶೇಷ ಆಸಕ್ತಿವಹಿಸಿರುವ ಶ್ರೀ ಕೆ.ಎಸ್. ಉಪಾಧ್ಯೆ, ಶ್ರೀ ನವಲಗುಂದ ಗೋವಿಂದರಾವ್, ಶ್ರೀ ಶ್ರೀನಿವಾಸರಾವ್, ಗದಕ್ಕರ್, ಶ್ರೀ ಉದ್ಧವ, ಗದಕ್ಕರ್, ಶ್ರೀ ಅಶೋಕ, ಚಚಡಿ, ಶ್ರೀ ಅಶೋಕ, ಹುದ್ದಾರ್, ಶ್ರೀ ಡಾ ವಿ.ಆರ್. ದೇಸಾಯಿ, ಶ್ರೀ ಪ್ರ. ಪಂಢರೀ, ಶ್ರೀ ದಾಮೋದರಾಚಾರ್, ಗುಡಿ, ಶ್ರೀ ತಿಮ್ಮಣ್ಣಾಚಾರ್, ಗುಡಿ, ಶ್ರೀ ಬದರೀಶಾಚಾರ್, ಗುಡಿ, ಶ್ರೀ ಮಾಧವ, ಗುಡಿ, ಶ್ರೀ ರಾಘವೇಂದ್ರ, ಗುಡಿ ಇತ್ಯಾದಿ ಧಾರವಾಡದ ಸಕಲ ಆಸ್ತಿಕ ವರ್ಗಕ್ಕೆ ಶ್ರೀ ಸೇವಕವೃಂದದ ಕೃತಜ್ಞತೆಗಳು.

ಈ ಗ್ರಂಥದ ಮುದ್ರಣದ ಡಿ.ಟಿ.ಪಿ. ಕಾರ್ಯವನ್ನು ಸುಂದರವಾಗಿ ನಿರ್ವಹಿಸಿದ 'ತುಳಸೀ ಇಂಪ್ರೆಷನ್ಸ್' ಹಾಗು ಸಕಾಲಕ್ಕೆ ತೃಪ್ತಿಕರವಾಗಿ ಮುದ್ರಣಮಾಡಿದ 'ಆದಿತ್ಯ ಪ್ರಿಂಟರ್ಸ್' ಸಂಸ್ಥೆಗೆ, ಹಾಗೂ ಮುಖಪುಟ ವಿನ್ಯಾಸ ಮಾಡಿದ ಶ್ರೀ ಶೇಷಗಿರಿ ಅವರಿಗೂ ಧನ್ಯವಾದಗಳು.

ಈ ಗ್ರಂಥಪ್ರಕಾಶನದ ಸದುಪಯೋಗವನ್ನು ಎಲ್ಲ ಸಜ್ಜನರೂ ಪಡೆಯಲೆಂದು ಆಶಿಸುತ್ತ ಈ ಗ್ರಂಥಪ್ರಕಾಶನ ರೂಪ ಸತ್ಕರ್ಮದಿಂದ ಶ್ರೀ ಹರಿ-ವಾಯು-ಗುರುಗಳು ಸುಪ್ರೀತರಾಗಲೆಂದು ಪ್ರಾರ್ಥಿಸುತ್ತೇವೆ.

ಅಕ್ಷೋಭ್ಯತೀರ್ಥರ ಆರಾಧನಾ
ಮಾರ್ಗ - ಕೃಷ್ಣ - ಪಂಚಮೀ
14-12-2003

ದ್ವಾರಕಾನಾಥ್
**ಶ್ರೀ ತ್ರೈಲೋಕಾಚಾರ್ಯರಸೇವಕವೃಂದದ**
**ಪರವಾಗಿ**

ಇದರಂತೆ ಈ 'ಮಣಿಮಂಜರೀವೈಭವ' ಗ್ರಂಥದ ಸಾರಸಂಗ್ರಹ ರೂಪ ಲೇಖನ ಬರೆದು, ಮುದ್ರಣದ ಪ್ರತಿಹಂತವನ್ನೂ ನಿರ್ವಹಿಸಿದ ಪೂಜ್ಯ ಆಚಾರ್ಯಪುತ್ರರಾದ ಶ್ರೀ ರುಚಿರಾ ಚಾರ್ಯರಿಗೆ ಅನೇಕ ಪ್ರಣಾಮಗಳು. ಅಂತೆಯೇ ಪೂಜ್ಯ ಆಚಾರ್ಯರ ಪುತ್ರರಾದ ಶ್ರೀ ರೋಚನಾಚಾರ್ಯರಿಗೆ, ಶಿಷ್ಯರಾದ ಶ್ರೀ ಜಾಲಿಹಾಳ ಸುಕೇಶಾಚಾರ್ಯರಿಗೆ, ಹೊಳಲುಗುಂದ ಜಯತೀರ್ಥಾಚಾರ್ಯ, ಕಣೇಕಲ್ ಶ್ರೀಕಾಂತಾಚಾರ್ಯ ಇವರಿಗೆಲ್ಲ ಕೃತಜ್ಞತಾಪೂರ್ವಕ ನಮಸ್ಕಾರಗಳು. ಹಗಲು – ರಾತ್ರಿ ಅನ್ನ-ನಿದ್ದೆಗಳನ್ನು ತೊರೆದು ಈ ಪುಸ್ತಕದ ಮುದ್ರಣವು ಸಕಾಲಕ್ಕೆ ಉಂಟಾಗಲು ಇವರೆಲ್ಲರೂ ಮಾಡಿರುವ ಪರಿಶ್ರಮ ಅನನ್ಯವಾಗಿದೆ.

ಮಣಿಮಂಜರೀ ವೈಭವದೊಡನೆ ಪೂರ್ವದಲ್ಲಿ ಈ ಗ್ರಂಥಕ್ಕೆ ಶೋಭೆಯಾಗಲೆಂದು ಹಾಗೂ ಈ ಗ್ರಂಥದ ಉಪಯೋಗ ಅಧಿಕವಾಗಲೆಂದು, ಶ್ರೀ ರಾಯಪಳ್ಳಿ ರಾಘವೇಂದ್ರಾ ಚಾರ್ಯರು ಮುದ್ರಿಸಿದ ವ್ಯಾಖ್ಯಾನಸಹಿತ ಮಣಿಮಂಜರಿಯನ್ನು ಇಲ್ಲಿ ಮುದ್ರಿಸಲು ಅನುಮತಿಸಿದ ಶ್ರೀ ರಾಯಪಳ್ಳಿ ಆಚಾರ್ಯರ ಪೌತ್ರರಾದ ಶ್ರೀವಿಜಯೀಂದ್ರಾಚಾರ್ಯರಿಗೆ ಹಾಗೂ ಶ್ರೀ ರಾಯಪಳ್ಳಿ ಆಚಾರ್ಯರ ಪರಿಚಯ ತಿಳಿಸಿದ ಗೋಪೀನಾಥ್ ರಾಯರಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ಈ ಗ್ರಂಥದ ರಚನಾವಸರದಲ್ಲಿ ಪೂಜ್ಯ ಆಚಾರ್ಯರು ಬಯಸುವ ಅನೇಕ ಗ್ರಂಥಗಳನ್ನು ಒದಗಿಸುತ್ತಿದ್ದ ಪೂಜ್ಯ ಆಚಾರ್ಯರ ಶಿಷ್ಯರಾದ ಶ್ರೀ ಮಾಧವರಾವ್ ಅವರನ್ನೂ ಇಲ್ಲಿ ಸ್ಮರಿಸುವುದು ಕರ್ತವ್ಯವಾಗಿದೆ. ಇದರಂತೆ ಸಕ್ರಿಯವಾಗಿ ಭಾಗವಹಿಸುವ ಎಲ್ಲ ಹರಿಭಕ್ತರಿಗೆ ಕೃತಜ್ಞತಾಪೂರ್ವಕ ವಂದನೆಗಳು.

ಇದಲ್ಲದೆ ಈ ಗ್ರಂಥಪ್ರಕಾಶನಕ್ಕೆ ಆರ್ಥಿಕವಾಗಿ ಸೇವೆ ಸಲ್ಲಿಸಿದ ಮಹನೀಯರನ್ನು ಇಲ್ಲಿ ನೆನೆಯುವುದು ಕರ್ತವ್ಯವಾಗಿದೆ.

| | | |
|---|---|---|
| 1. | ಮಾತಾಪಿತೃಸ್ಮರಣಾರ್ಥವಾಗಿ ಹೆಬ್ಬಾಳ್ ನಾಗರಾಜಾಚಾರ್ | 20.000 |
| 2. | ಕೆ.ವಿ. ವೆಂಕಟೇಶಯ್ಯ | 10.000 |
| 3. | ಶ್ರೀ ಲಕ್ಷ್ಮೀನಾರಾಯಣರಾಯರು | 10.000 |
| 4. | ಅನಂತಸ್ವಾಮಿ | 10.000 |
| 5. | ಚಿಂಚೋಳಿ ಬದರೀನಾಥ | 5.000 |
| 6. | ಪ್ರಸನ್ನಾಚಾರ್ ಮಾನವಿ | 5.000 |
| 7. | ಶ್ರೀ ಆಚಾರ್ಯ ವಿದ್ಯಾಧಿಷ್ಠಾನಂ | 5.000 |
| 8. | ಕೃಷ್ಣಮೂರ್ತಿ | 5.000 |
| 9. | ನಾರಾಯಣರಾವ್, ಬಳ್ಳಾರಿ | 5.000 |
| 10. | ಗುರುಪ್ರಸಾದ್, ಉಡುಪಿ | 2.000 |
| 11. | ಕಾಶೀ ರಮೇಶ್ | 2.000 |

ಹೀಗೆ ಈ ಗ್ರಂಥದ ಮುದ್ರಣಕ್ಕೆ ನೆರವಾದ ಈ ಹರಿ-ಗುರುಭಕ್ತರಿಗೆ ಕೃತಜ್ಞತಾ ಪೂರ್ವಕ ಅನೇಕ ವಂದನೆಗಳು. ಇದರಂತೆ ಈ ಗ್ರಂಥದ ಪ್ರಕಾಶನ ಮಹೋತ್ಸವಕ್ಕೆ ಆರ್ಥಿಕವಾಗಿ ಸೇವೆ ಮಾಡಿರುವ ಎಲ್ಲ ಹರಿ-ಗುರುಭಕ್ತರಿಗೂ ವಂದನೆಗಳು.

ಇದಲ್ಲದೆ, ಧಾರವಾಡದಲ್ಲಿ ಈ ಗ್ರಂಥದ ಪ್ರಕಾಶನೋತ್ಸವ ಸಮಾರಂಭವನ್ನು ಹಮ್ಮಿಕೊಂಡು ಶ್ರೀ ಹರಿ-ವಾಯು-ಗುರುಗಳ ವಿಶೇಷ ಸೇವೆ ಮಾಡುತ್ತಿರುವ, ಅದಕ್ಕೆ ತನು-ಮನ-ಧನಗಳಿಂದ ಉತ್ಸಾಹಪೂರ್ಣವಾಗಿ ಭಾಗವಹಿಸುವ ಧಾರವಾಡದ ಅಶೇಷ ವೈದಿಕ-ಲೌಕಿಕ ಸಾತ್ವಿಕ ಜನರಿಗೆ ಕೃತಜ್ಞತಾಪೂರ್ವಕ ವಂದನೆಗಳು. ಅದರಲ್ಲಿ ವಿಶೇಷತಃ ಈ ಉತ್ಸವದಲ್ಲಿ ಅಧ್ಯಕ್ಷರಾಗಿ ಭಾಗವಹಿಸಿದ ಶ್ರೀ ಪಂಡಿತಪ್ರಕಾಂಡ ಶ್ರೀ ಗಂಗೂರು ರಾಘವೇಂದ್ರಾಚಾರ್ಯರಿಗೆ, ಈ ಉತ್ಸವದ ಆಯೋಜನೆಗಾಗಿ ಹಗಲಿರುಳೂ ಶ್ರಮವಹಿಸಿ ಯಶಸ್ವಿಗೆ ಕಾರಣರಾದ ಪೂಜ್ಯ ಜಾಲಿಹಾಳಾಚಾರ್ಯರ ಮಕ್ಕಳಾದ ಶ್ರೀ ಸೇತೂರಾಮಾಚಾರ್ಯರಿಗೆ, ಶ್ರೀ ಜಾಲಿಹಾಳ ಗೋಪಾಲಕೃಷ್ಣಾಚಾರ್ಯರಿಗೆ ಬಾಗಲಕೋಟೆ ರಾಮಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳು.

ಇದರಂತೆ, ಶ್ರೀ ವನವಾಸೀ ರಾಮಮಂದಿರದಲ್ಲಿ ಈ ಉತ್ಸವವನ್ನು ನಡೆಸಲು ಉತ್ಸಾಹದಿಂದ ಪ್ರವೃತ್ತರಾದ ಶ್ರೀ ವನವಾಸೀರಾಮಮಂದಿರ ವಿಶ್ವಸ್ಥ ಮಂಡಳಿಗೆ ಶ್ರೀ ಸೇವಕವೃಂದದ ಕೃತಜ್ಞತಾ ಪೂರ್ವಕ ವಂದನೆಗಳು. ಇದಲ್ಲದೆ, ಈ ಉತ್ಸವದ ಬಗ್ಗೆ ವಿಶೇಷ ಆಸಕ್ತಿವಹಿಸಿರುವ ಶ್ರೀ ಕೆ.ಎಸ್. ಉಪಾಧ್ಯೆ, ಶ್ರೀ ನವಲಗುಂದ ಗೋವಿಂದರಾವ್, ಶ್ರೀ ಶ್ರೀನಿವಾಸರಾವ್, ಗದಕ್ಕರ್, ಶ್ರೀ ಉದ್ಧವ, ಗದಕ್ಕರ್, ಶ್ರೀ ಅಶೋಕ, ಚಚಡಿ, ಶ್ರೀ ಅಶೋಕ, ಹುದ್ದಾರ್, ಶ್ರೀ ಡಾ ವಿ.ಆರ್. ದೇಸಾಯಿ, ಶ್ರೀ ಪ್ರ. ಪಂಢರೀ, ಶ್ರೀ ದಾಮೋದರಾಚಾರ್, ಗುಡಿ, ಶ್ರೀ ತಿಮ್ಮಣ್ಣಾಚಾರ್, ಗುಡಿ, ಶ್ರೀ ಬದರೀಶಾಚಾರ್, ಗುಡಿ, ಶ್ರೀ ಮಾಧವ, ಗುಡಿ, ಶ್ರೀ ರಾಘವೇಂದ್ರ, ಗುಡಿ ಇತ್ಯಾದಿ ಧಾರವಾಡದ ಸಕಲ ಆಸ್ತಿಕ ವರ್ಗಕ್ಕೆ ಶ್ರೀ ಸೇವಕವೃಂದದ ಕೃತಜ್ಞತೆಗಳು.

ಈ ಗ್ರಂಥದ ಮುದ್ರಣದ ಡಿ.ಟಿ.ಪಿ. ಕಾರ್ಯವನ್ನು ಸುಂದರವಾಗಿ ನಿರ್ವಹಿಸಿದ 'ತುಳಸೀ ಇಂಪ್ರೆಷನ್ಸ್' ಹಾಗು ಸಕಾಲಕ್ಕೆ ತೃಪ್ತಿಕರವಾಗಿ ಮುದ್ರಣಮಾಡಿದ 'ಆದಿತ್ಯ ಪ್ರಿಂಟರ್ಸ್' ಸಂಸ್ಥೆಗೆ, ಹಾಗೂ ಮುಖಪುಟ ವಿನ್ಯಾಸ ಮಾಡಿದ ಶ್ರೀ ಶೇಷಗಿರಿ ಅವರಿಗೂ ಧನ್ಯವಾದಗಳು.

ಈ ಗ್ರಂಥಪ್ರಕಾಶನದ ಸದುಪಯೋಗವನ್ನು ಎಲ್ಲ ಸಜ್ಜನರೂ ಪಡೆಯಲೆಂದು ಆಶಿಸುತ್ತ, ಈ ಗ್ರಂಥಪ್ರಕಾಶನ ರೂಪ ಸತ್ಕರ್ಮದಿಂದ ಶ್ರೀ ಹರಿ-ವಾಯು-ಗುರುಗಳು ಸುಪ್ರೀತರಾಗಲೆಂದು ಪ್ರಾರ್ಥಿಸುತ್ತೇವೆ.

ಅಕ್ಷೋಭ್ಯತೀರ್ಥರ ಆರಾಧನಾ<br>
ಮಾರ್ಗ - ಕೃಷ್ಣ - ಪಂಚಮೀ<br>
14-12-2003

ದ್ವಾರಕಾನಾಥ್<br>
**ಶ್ರೀ ತ್ರೈಲೋಕಾಚಾರ್ಯರಸೇವಕವೃಂದದ**<br>
**ಪರವಾಗಿ**

ಇದರಂತೆ ಈ 'ಮಣಿಮಂಜರೀವೈಭವ' ಗ್ರಂಥದ ಸಾರಸಂಗ್ರಹ ರೂಪ ಲೇಖನ ಬರೆದು, ಮುದ್ರಣದ ಪ್ರತಿಹಂತವನ್ನೂ ನಿರ್ವಹಿಸಿದ ಪೂಜ್ಯ ಆಚಾರ್ಯಪುತ್ರರಾದ ಶ್ರೀ ರುಚಿರಾಚಾರ್ಯರಿಗೆ ಅನೇಕ ಪ್ರಣಾಮಗಳು. ಅಂತೆಯೇ ಪೂಜ್ಯ ಆಚಾರ್ಯರ ಪುತ್ರರಾದ ಶ್ರೀ ರೋಚನಾಚಾರ್ಯರಿಗೆ, ಶಿಷ್ಯರಾದ ಶ್ರೀ ಜಾಲಿಹಾಳ ಸುಕೇಶಾಚಾರ್ಯರಿಗೆ, ಹೊಳಲುಗುಂದ ಜಯತೀರ್ಥಾಚಾರ್ಯ, ಕಣೇಕಲ್ ಶ್ರೀಕಾಂತಾಚಾರ್ಯ ಇವರಿಗೆಲ್ಲ ಕೃತಜ್ಞತಾಪೂರ್ವಕ ನಮಸ್ಕಾರಗಳು. ಹಗಲು – ರಾತ್ರಿ ಅನ್ನ-ನಿದ್ದೆಗಳನ್ನು ತೊರೆದು ಈ ಪುಸ್ತಕದ ಮುದ್ರಣವು ಸಕಾಲಕ್ಕೆ ಉಂಟಾಗಲು ಇವರೆಲ್ಲರೂ ಮಾಡಿರುವ ಪರಿಶ್ರಮ ಅನನ್ಯವಾಗಿದೆ.

ಮಣಿಮಂಜರೀ ವೈಭವದೊಡನೆ ಪೂರ್ವದಲ್ಲಿ ಈ ಗ್ರಂಥಕ್ಕೆ ಶೋಭೆಯಾಗಲೆಂದು ಹಾಗೂ ಈ ಗ್ರಂಥದ ಉಪಯೋಗ ಅಧಿಕವಾಗಲೆಂದು, ಶ್ರೀ ರಾಯಪಳ್ಳಿ ರಾಘವೇಂದ್ರಾಚಾರ್ಯರು ಮುದ್ರಿಸಿದ ವ್ಯಾಖ್ಯಾನಸಹಿತ ಮಣಿಮಂಜರಿಯನ್ನು ಇಲ್ಲಿ ಮುದ್ರಿಸಲು ಅನುಮತಿಸಿದ ಶ್ರೀ ರಾಯಪಳ್ಳಿ ಆಚಾರ್ಯರ ಪೌತ್ರರಾದ ಶ್ರೀವಿಜಯೀಂದ್ರಾಚಾರ್ಯರಿಗೆ ಹಾಗೂ ಶ್ರೀ ರಾಯಪಳ್ಳಿ ಆಚಾರ್ಯರ ಪರಿಚಯ ತಿಳಿಸಿದ ಗೋಪೀನಾಥ್ ರಾಯರಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ಈ ಗ್ರಂಥದ ರಚನಾವಸರದಲ್ಲಿ ಪೂಜ್ಯ ಆಚಾರ್ಯರು ಬಯಸುವ ಅನೇಕ ಗ್ರಂಥಗಳನ್ನು ಒದಗಿಸುತ್ತಿದ್ದ ಪೂಜ್ಯ ಆಚಾರ್ಯರ ಶಿಷ್ಯರಾದ ಶ್ರೀ ಮಾಧವರಾವ್ ಅವರನ್ನೂ ಇಲ್ಲಿ ಸ್ಮರಿಸುವುದು ಕರ್ತವ್ಯವಾಗಿದೆ. ಇದರಂತೆ ಸಕ್ರಿಯವಾಗಿ ಭಾಗವಹಿಸುವ ಎಲ್ಲ ಹರಿಭಕ್ತರಿಗೆ ಕೃತಜ್ಞತಾಪೂರ್ವಕ ವಂದನೆಗಳು.

ಇದಲ್ಲದೆ ಈ ಗ್ರಂಥಪ್ರಕಾಶನಕ್ಕೆ ಆರ್ಥಿಕವಾಗಿ ಸೇವೆ ಸಲ್ಲಿಸಿದ ಮಹನೀಯರನ್ನು ಇಲ್ಲಿ ನೆನೆಯುವುದು ಕರ್ತವ್ಯವಾಗಿದೆ.

| | | |
|---|---|---|
| 1. | ಮಾತಾಪಿತೃಸ್ಮರಣಾರ್ಥವಾಗಿ ಹೆಬ್ಬಾಳ್ ನಾಗರಾಜಾಚಾರ್ | 20.000 |
| 2. | ಕೆ.ವಿ. ವೆಂಕಟೇಶಯ್ಯ | 10.000 |
| 3. | ಶ್ರೀ ಲಕ್ಷ್ಮೀನಾರಾಯಣರಾಯರು | 10.000 |
| 4. | ಅನಂತಸ್ವಾಮಿ | 10.000 |
| 5. | ಚಿಂಚೋಳಿ ಬದರೀನಾಥ | 5.000 |
| 6. | ಪ್ರಸನ್ನಾಚಾರ್ ಮಾನವಿ | 5.000 |
| 7. | ಶ್ರೀ ಆಚಾರ್ಯ ವಿದ್ಯಾಧಿಷ್ಠಾನಂ | 5.000 |
| 8. | ಕೃಷ್ಣಮೂರ್ತಿ | 5.000 |
| 9. | ನಾರಾಯಣರಾವ್, ಬಳ್ಳಾರಿ | 5.000 |
| 10. | ಗುರುಪ್ರಸಾದ್, ಉಡುಪಿ | 2.000 |
| 11. | ಕಾಶೀ ರಮೇಶ್ | 2.000 |

ಹೀಗೆ ಈ ಗ್ರಂಥದ ಮುದ್ರಣಕ್ಕೆ ನೆರವಾದ ಈ ಹರಿ-ಗುರುಭಕ್ತರಿಗೆ ಕೃತಜ್ಞತಾ ಪೂರ್ವಕ ಅನೇಕ ವಂದನೆಗಳು. ಇದರಂತೆ ಈ ಗ್ರಂಥದ ಪ್ರಕಾಶನ ಮಹೋತ್ಸವಕ್ಕೆ ಆರ್ಥಿಕವಾಗಿ ಸೇವೆ ಮಾಡಿರುವ ಎಲ್ಲ ಹರಿ-ಗುರುಭಕ್ತರಿಗೂ ವಂದನೆಗಳು.

ಇದಲ್ಲದೆ, ಧಾರವಾಡದಲ್ಲಿ ಈ ಗ್ರಂಥದ ಪ್ರಕಾಶನೋತ್ಸವ ಸಮಾರಂಭವನ್ನು ಹಮ್ಮಿಕೊಂಡು ಶ್ರೀ ಹರಿ-ವಾಯು-ಗುರುಗಳ ವಿಶೇಷ ಸೇವೆ ಮಾಡುತ್ತಿರುವ, ಅದಕ್ಕೆ ತನು-ಮನ-ಧನಗಳಿಂದ ಉತ್ಸಾಹಪೂರ್ಣವಾಗಿ ಭಾಗವಹಿಸುವ ಧಾರವಾಡದ ಅಶೇಷ ವೈದಿಕ-ಲೌಕಿಕ ಸಾತ್ವಿಕ ಜನರಿಗೆ ಕೃತಜ್ಞತಾಪೂರ್ವಕ ವಂದನೆಗಳು. ಅದರಲ್ಲಿ ವಿಶೇಷತಃ ಈ ಉತ್ಸವದಲ್ಲಿ ಅಧ್ಯಕ್ಷರಾಗಿ ಭಾಗವಹಿಸಿದ ಶ್ರೀ ಪಂಡಿತಪ್ರಕಾಂಡ ಶ್ರೀ ಗಂಗೂರು ರಾಘವೇಂದ್ರಾಚಾರ್ಯರಿಗೆ, ಈ ಉತ್ಸವದ ಆಯೋಜನೆಗಾಗಿ ಹಗಲಿರುಳೂ ಶ್ರಮವಹಿಸಿ ಯಶಸ್ವಿಗೆ ಕಾರಣರಾದ ಪೂಜ್ಯ ಜಾಲಿಹಾಳಾಚಾರ್ಯರ ಮಕ್ಕಳಾದ ಶ್ರೀ ಸೇತೂರಾಮಾಚಾರ್ಯರಿಗೆ, ಶ್ರೀ ಜಾಲಿಹಾಳ ಗೋಪಾಲಕೃಷ್ಣಾಚಾರ್ಯರಿಗೆ ಬಾಗಲಕೋಟೆ ರಾಮಾಚಾರ್ಯರಿಗೆ ಸಾಷ್ಟಾಂಗ ಪ್ರಣಾಮಗಳು.

ಇದರಂತೆ, ಶ್ರೀ ವನವಾಸೀ ರಾಮಮಂದಿರದಲ್ಲಿ ಈ ಉತ್ಸವವನ್ನು ನಡೆಸಲು ಉತ್ಸಾಹದಿಂದ ಪ್ರವೃತ್ತರಾದ ಶ್ರೀ ವನವಾಸೀರಾಮಮಂದಿರ ವಿಶ್ವಸ್ಥ ಮಂಡಳಿಗೆ ಶ್ರೀ ಸೇವಕವೃಂದದ ಕೃತಜ್ಞತಾ ಪೂರ್ವಕ ವಂದನೆಗಳು. ಇದಲ್ಲದೆ, ಈ ಉತ್ಸವದ ಬಗ್ಗೆ ವಿಶೇಷ ಆಸಕ್ತಿವಹಿಸಿರುವ ಶ್ರೀ ಕೆ.ಎಸ್. ಉಪಾಧ್ಯೆ, ಶ್ರೀ ನವಲಗುಂದ ಗೋವಿಂದರಾವ್, ಶ್ರೀ ಶ್ರೀನಿವಾಸರಾವ್, ಗದಕ್ಕರ್, ಶ್ರೀ ಉದ್ಧವ, ಗದಕ್ಕರ್, ಶ್ರೀ ಅಶೋಕ, ಚಚಡಿ, ಶ್ರೀ ಅಶೋಕ, ಹುದ್ದಾರ್, ಶ್ರೀ ಡಾ ವಿ.ಆರ್. ದೇಸಾಯಿ, ಶ್ರೀ ಪ್ರ. ಪಂಢರೀ, ಶ್ರೀ ದಾಮೋದರಾಚಾರ್, ಗುಡಿ, ಶ್ರೀ ತಿಮ್ಮಣ್ಣಾಚಾರ್, ಗುಡಿ, ಶ್ರೀ ಬದರೀಶಾಚಾರ್, ಗುಡಿ, ಶ್ರೀ ಮಾಧವ, ಗುಡಿ, ಶ್ರೀ ರಾಘವೇಂದ್ರ, ಗುಡಿ ಇತ್ಯಾದಿ ಧಾರವಾಡದ ಸಕಲ ಆಸ್ತಿಕ ವರ್ಗಕ್ಕೆ ಶ್ರೀ ಸೇವಕವೃಂದದ ಕೃತಜ್ಞತೆಗಳು.

ಈ ಗ್ರಂಥದ ಮುದ್ರಣದ ಡಿ.ಟಿ.ಪಿ. ಕಾರ್ಯವನ್ನು ಸುಂದರವಾಗಿ ನಿರ್ವಹಿಸಿದ 'ತುಳಸೀ ಇಂಪ್ರೆಷನ್ಸ್' ಹಾಗು ಸಕಾಲಕ್ಕೆ ತೃಪ್ತಿಕರವಾಗಿ ಮುದ್ರಣಮಾಡಿದ 'ಆದಿತ್ಯ ಪ್ರಿಂಟರ್ಸ್' ಸಂಸ್ಥೆಗೆ, ಹಾಗೂ ಮುಖಪುಟ ವಿನ್ಯಾಸ ಮಾಡಿದ ಶ್ರೀ ಶೇಷಗಿರಿ ಅವರಿಗೂ ಧನ್ಯವಾದಗಳು.

ಈ ಗ್ರಂಥಪ್ರಕಾಶನದ ಸದುಪಯೋಗವನ್ನು ಎಲ್ಲ ಸಜ್ಜನರೂ ಪಡೆಯಲೆಂದು ಆಶಿಸುತ್ತ, ಈ ಗ್ರಂಥಪ್ರಕಾಶನ ರೂಪ ಸತ್ಕರ್ಮದಿಂದ ಶ್ರೀ ಹರಿ-ವಾಯು-ಗುರುಗಳು ಸುಪ್ರೀತರಾಗಲೆಂದು ಪ್ರಾರ್ಥಿಸುತ್ತೇವೆ.

ಅಕ್ಷೋಭ್ಯತೀರ್ಥರ ಆರಾಧನಾ
ಮಾರ್ಗ - ಕೃಷ್ಣ - ಪಂಚಮೀ
14-12-2003

ದ್ವಾರಕಾನಾಥ್
ಶ್ರೀ ತ್ರೈಲೋಕಾಚಾರ್ಯರಸೇವಕವೃಂದದ
ಪರವಾಗಿ

# ग्रन्थानुक्रमणिका



**श्रीश्री अक्षोभ्यतीर्थप्रतिष्ठितः अङ्गारनरसिंहः**

नरसिंहोऽखिलाज्ञानमतध्वान्तदिवाकरः ।
जयत्यमितसज्ज्ञानसुखशक्तिपयोनिधिः ॥





**श्रीश्री आनन्दतीर्थभगवत्पादाचार्याः**

अभ्रमं भङ्गरहितं अजडं विमलं सदा ।
आनन्दतीर्थमतुलं भजे तापत्रयापहम् ॥



**श्रीश्री जयतीर्थश्रीचरणाः**

चित्रैः पदैश्च गम्भीरैः वाक्यैर्मानैरखण्डितैः ।
गुरुभावं व्यञ्जयन्ती भाति श्रीजयतीर्थवाक् ॥



**श्रीश्रीव्यासतीर्थाः**

अर्थिकल्पितकल्पोऽयं प्रत्यर्थिगजकेसरी ।
व्यासतीर्थगुरुर्भूयात् अस्मदिष्टार्थसिद्धये ॥



श्रीश्री राघवेन्द्रतीर्थगुरुसार्वभौमाः

पूज्याय राघवेन्द्राय सत्यधर्मरताय च ।
भजतां कल्पवृक्षाय नमतां कामधेनवे ॥



**श्रीश्री सत्यध्यानतीर्थाः**

वेदशास्त्रपुराणाब्धिविक्रीडनविशारदान् ।
श्रीसत्यध्यानतीर्थाख्यान् उपतिष्ठे गुरून् मम ॥



पण्डितराज श्री जालिहाळ श्रीनिवासाचार्याः

वेदशास्त्रपुराणार्थरसपीयूषवर्षकान् ।
शिष्यवात्सल्यभरितान् जालिहाळगुरून् भजे ।।

# ಗ್ರಂಥಕರ್ತರ ಪರಿಚಯ

ಇಲ್ಲಿ ಮಣಿಮಂಜರೀ - ಅದರ ಸಂಸ್ಕೃತ ಕನ್ನಡ ವ್ಯಾಖ್ಯೆ - ಮಣಿಮಂಜರೀ ವೈಭವ ಎಂದು ಮೂರು ಗ್ರಂಥಗಳ ತ್ರಿವೇಣೀ ಸಂಗಮವಿದೆ. ಈ ಗ್ರಂಥಕಾರರು ಲೋಕವಿಖ್ಯಾತರಾದರೂ ಅವರ ಪರಿಚಯವನ್ನು ಬರೆಯುವುದು ಕರ್ತವ್ಯವೂ ಸ್ಮರಣಾಖ್ಯ ಭಾಗವತಧರ್ಮವೂ ಆಗುತ್ತದೆ.

## ಶ್ರೀ ನಾರಾಯಣಪಂಡಿತಾಚಾರ್ಯರು

ಇವರು ಮಣಿಮಂಜರಿಯನ್ನು ರಚಿಸಿದವರು. ಕವಿಕುಲತಿಲಕ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು. ತ್ರಿವಿಕ್ರಮಪಂಡಿತಾಚಾರ್ಯರು ಶ್ರೀಮಧ್ವಾಚಾರ್ಯರೊಡನೆ 15 ದಿನ ವಾದಮಾಡಿ ಶ್ರೀಮದಾಚಾರ್ಯರ ಮತವೇ ಸಕಲ ಶ್ರುತಿ ಸಮ್ಮತವೆಂದು ನಿಶ್ಚಯಿಸಿ ಪೂರ್ವದಲ್ಲಿ ನಂಬಿದ್ದ ಅದ್ವೈತಮತವನ್ನು ತೊರೆದು ಮಾಧ್ವರಾದವರು. ಅಂತೆಯೇ ಮಧ್ವಾಚಾರ್ಯರ ಪ್ರಿಯಶಿಷ್ಯರು. ಲಿಕುಚವಂಶದ ಈ ತ್ರಿವಿಕ್ರಮಪಂಡಿತರ ಮೂರು ಮಕ್ಕಳಲ್ಲಿ ನಾರಾಯಣ ಪಂಡಿತಾರ್ಚಾರು ಮೂರನೆಯವರು. ಈ ಅಪ್ಪ-ಮಗ ಇಬ್ಬರಿಗೂ ಶ್ರೀ ಹರಿ-ವಾಯುಗಳಲ್ಲಿ ವಿಶೇಷ ಭಕ್ತಿಯು, ಅದಕ್ಕೆ ಸಾಕ್ಷಿಯೇ ವಾಯುಸ್ತುತಿ-ಮಧ್ವವಿಜಯ- ಮಣಿಮಂಜರೀ ಇತ್ಯಾದಿ ಕೃತಿಗಳು. ಈ ಕೃತಿಗಳಿಂದ ಮಾಧ್ವದೀಕ್ಷೆ ಸುದೃಢವೆಂದು ಎಲ್ಲರಿಗೂ ತಿಳಿದ ಸಂಗತಿಯು. ಹೀಗೆ ಮಾಧ್ವ ಜನತೆಗೆ ಚಿರ ಪರಿಚಿತರಾದ ಶ್ರೀ ನಾರಾಯಣ ಪಂಡಿತಾಚಾರ್ಯರು ಬಾಲ್ಯದಲ್ಲಿ ಶ್ರೀಮದಾಚಾರ್ಯರನ್ನು ಕಂಡ ಧನ್ಯರು. ಪಂಡಿತ್ಯಾರ್ಯರ ಪಾಂಡಿತ್ಯಕ್ಕೆ ಅನೇಕ ಗ್ರಂಥಗಳು ಸಾಕ್ಷಿಯಾಗಿವೆ. ಅವುಗಳಲ್ಲಿ

ಅನುವ್ಯಾಖ್ಯಾನಟೀಕೆ
ತತ್ವನಿರ್ಣಯಟೀಕೆ
ಸಂಗ್ರಹ ರಾಮಾಯಣ

ಇತ್ಯಾದಿಗಳು ಉಲ್ಲೇಖಾರ್ಹವಾಗಿದೆ. ಎಲ್ಲದುಕ್ಕಿಂತ ಮಣಿಮಂಜರೀ - ಮಧ್ವವಿಜಯಗಳಿಂದ ಪಂಡಿತಾಚಾರ್ಯರು ಮಾಡಿದ ಉಪಕಾರ ಅನನ್ಯವಾದುದು. ಇಂಥ ಪಂಡಿತಾಚಾರ್ಯರ ಬಗ್ಗೆ ಹೆಚ್ಚು ಹೇಳುವುದು ಸೂರ್ಯನನ್ನು ಪರಿಚಯಿಸಲು ಹೊರಟಂತೆ ನಗೆಪಾಟಲಾಗುತ್ತದೆ.

## ಶ್ರೀ ರಾಯಪಳ್ಳಿ ರಾಘವೇಂದ್ರಾಚಾಯರು

ಪ್ರಕಾಂಡ ಪಂಡಿತರೂ ಸಾತ್ವಿಕರೂ ಸದಾಚಾರ ಸಂಪನ್ನರೂ ವೈಷ್ಣವ ದೀಕ್ಷಾಧುರಂಧರರಾದ ಶ್ರೀ ರಾಯಪಳ್ಳಿ ರಾಘವೇಂದ್ರಾಚಾರ್ಯರು ಮಣಿಮಂಜರಿಯ ಸಂಸ್ಕೃತ-ಕನ್ನಡ ಉಭಯ

ವ್ಯಾಖ್ಯಾನ ರಚಿಸಿದ ಮಹನೀಯರು. ಮಣಿಮಂಜರಿಯನ್ನು ಐತಿಹಾಸಿಕವಾಗಿ ವಿಮರ್ಶಿಸುವ ರೀತಿಯನ್ನು ಮುಂದಿಟ್ಟ ಧೀಮಂತ ವ್ಯಕ್ತಿಗಳು. ಇವರ ಜೀವನ ಚರಿತೆಯ ಬಗ್ಗೆ ಮೈಸೂರು ಗೋಪೀನಾಥರಾಯರು ಬರೆದ ಲೇಖನ ಇಲ್ಲಿ ಉಲ್ಲೇಖಾರ್ಹವಾಗಿದೆ.

ಶ್ರೀಮನ್‌ನೃಪ ಶಾಲಿವಾಹನ ಶಕ 1782ರ ಅಂದರೆ ಹೂಣ ಶಖ 1860ರ ಸುಮಾರಿನಲ್ಲಿ ಆಂಧ್ರಪ್ರದೇಶದ ಪುಂಗನೂರು ಗ್ರಾಮದಲ್ಲಿ ಶ್ರೀಶಾಂಡಿಲ್ಯ ಗೋತ್ರೋತ್ಪನ್ನರೂ ಋಕ್ ಶಾಖಾಧ್ಯಾಯಿಗಳು ಆದ ಅಣ್ಣಯ್ಯಾಚಾರ್ಯರೆಂಬ ವೈಷ್ಣವ ವಿಪ್ರೋತ್ತಮರು, ತಮ್ಮ ಧರ್ಮಪತ್ನಿ ಕೋಟ್ಯಮ್ಮರೊಂದಿಗೆ ಗೃಹಸ್ಥ ಧರ್ಮ ನಿರತರಾಗಿ ಸಚ್ಛಾಸ್ತ್ರ ಪಾಠ ಪ್ರವಚನಗಳಿಂದ ಸಾಧನ ಮಾಡಿಕೊಂಡಿದ್ದರು. ಇವರು ಒಂದು ಸತ್‌ಸಂತಾನಾರ್ಥವಾಗಿ ಶ್ರೀಮಳಖೇಡ ರಾಯರ ಸೇವೆ ಮಾಡಿದಾಗ, ಅವರ ಸೂಚನೆಯಂತೆ ಪುನಃ ಶ್ರೀಮಂತ್ರಾಲಯ ಪ್ರಭುಗಳ ಸೇವಾ ಮಾಡಿದರು. ದಿನಕ್ಕೊಂದು ಏಲಕ್ಕಿ ಮಾತ್ರ ಸೇವಿಸಿ ಕಠಿಣ ಸೇವಾ ಒಂದು ವಾರ ಮಾಡಿದರು. ಇದಕ್ಕೆ ಸುಪ್ರೀತ ರಾದ ಶ್ರೀಮಂತ್ರಾಲಯ ಸ್ವಾಮಿಗಳು ಸ್ವಪ್ನದಲ್ಲಿ ಕಾಣಿಸಿಕೊಂಡು "ಒಬ್ಬ ಸುಪುತ್ರ ಹುಟ್ಟುತ್ತಾನೆ" ಎಂದು ಹೇಳಿದರು. ಅದರ ಫಲವೇ ಏಲಕ್ಕಿಯಂತಹ ಶ್ರೀ ರಾಘವೇಂದ್ರಾಚಾರ್ಯರ ಜನನ. ಇಬ್ಬರು ಗುರುಗಳ ದಯೆಯಿಂದ ಜನ್ಮ ತಾಳಿದ್ದರೆಂದರೆ ಇವರು ದೊಡ್ಡವರು ಎಂಬುವುದರಲ್ಲಿ ಸಂದೇಹವಿಲ್ಲ, ಪರಮತ ಖಂಡನ ಪೂರ್ವಕ, ಸ್ವಮತ ಸ್ಥಾಪನ ದೀಕ್ಷಾ ಬದ್ಧರಾಗಿ, ಅಂತಹ ಶಿಷ್ಯ ಪರಂಪರೆಯನ್ನು ಮುಂದುವರಿಸಿ 63 ವರ್ಷ ದೀರ್ಘಕಾಲ ಸಾಧನೆ ಮಾಡಿ ಶಿಷ್ಯರಿಂದ ಮಾಡಿಸಿ ಜಗತ್ತಿಗೆ ಶ್ರೀಮಧ್ವಮತ ಅಂದರೆ ಏನು ಅಂತ ತಿಳಿಸಿ ಉಪಕಾರ ಮಾಡಿದವರು.

ಶ್ರೀ ರಾಯಪಾಳ್ಯಂ ರಾಘವೇಂದಾರಾಚರ್ಯರು ಶ್ರೀಪುಂಗನೂರು ರಾಘವೇಂದ್ರಾ ಚಾರ್ಯರೆಂದೇ ಖ್ಯಾತರಾಗಿದ್ದರು. ಕಾರಣ ಅವರು ಪುಂಗನೂರಿನಲ್ಲಿದ್ದು ಶ್ರೀ 108 ಸತ್ಯಧರ್ಮಶ್ರೀಪಾಂದಗಳವರ ಶಿಷ್ಯರಾಗಿದ್ದ ಪೂಜ್ಯರಾಗಿದ್ದ ಕಟ್ಟಿ ನರಸಿಂಹಾಚಾರ್ಯರಲ್ಲಿ ಷಡಂಗ ವೇದಾಧ್ಯಯನ ಮಾಡಿದ್ದರು, ಆಗಿನ ಕಾಲದ ಗುರುಗಳು, ಅವರಿಗೆ ತಕ್ಕ ಆಗಿನ ಕಾಲದ ಶಿಷ್ಯರು. ಉತ್ತಮ ನಡತೆಯಿಂದ ತಮ್ಮ ಪಾಠ ಪ್ರವಚನಗಳಲ್ಲಿ ಆದರ್ಶ ವಿದ್ಯಾರ್ಥಿ ಶ್ರೀ ರಾಘವೇಂದ್ರಾಚಾರ್ಯರನ್ನು ಕಂಡರೆ ಗುರುಗಳಿಗೆ ತುಂಬಾ ಶಿಷ್ಯವಾತ್ಸಲ್ಯ. ಆಗಿನ ಕಾಲದಲ್ಲಿ ಶಿಷ್ಯರಿಂದ, ಶಿಷ್ಯರ ಹದಿನಾರನೇ ವಯಸ್ಸಿನಲ್ಲೇ ಟೀಕಾ, ಟಿಪ್ಪಣಿ, ವ್ಯಾಕರಣ, ಜ್ಞಾನ, ಅನುಸಂಧಾನ ದೀಕ್ಷಾ ಬದ್ಧವಾಗಿ ಸಮಗ್ರ ಶ್ರೀಮನ್‌ನ್ಯಾಯಸುದಾಮಂಗಳ ಮುಹೂರ್ತ ಮಾಡಿಸಿದ್ದರಂತೆ. ಪಂಡಿತ ಪ್ರಕಾಂಡರಾದ ಶ್ರೀ ಕಟ್ಟಿ ಆಚಾರ್ಯರ್ರಿಗೆ ಮಕ್ಕಳಿರಲಿಲ್ಲ, ಅವರು ಶಿಷ್ಯರನ್ನೇ ಮಕ್ಕಳು ಎಂದು ತಿಳಿದು ಸಂತೋಷವಾಗಿದ್ದರೂ ಈ ಕೊರತೆಯಂತೂ ಇದ್ದೇ ಇತ್ತು. ಶ್ರೀ ರಾಘವೇಂದ್ರಾಚಾರ್ಯರ ವಂಶದಲ್ಲಿ ಗಂಡು ಮಕ್ಕಳು ತುಂಬಾ ಅಪರೂಪ ಶ್ರೀ ಆಚಾರ್ಯರಿಗೂ ಬಹುಕಾಲ ಮಕ್ಕಳಿರಲಿಲ್ಲ, ತುಂಬಾ ವ್ರತ ನಿಯಮ ಮಾಡಿದಾಗ ಈ ಶ್ರೀಆಚಾರ್ಯರಿಗೆ ಮಗು ಹುಟ್ಟಿತು. ತುಂಬಾ ಸುಂದರವಾದ ಸುಲಕ್ಷಣವಾದ ಮಗು, ಅಂತಹ ಮಗುವನ್ನು ಕೂಡಲೇ (ಮಂಗಳಸ್ನಾನವಾದ ಕೂಡಲೇ) ತಮ್ಮ ಗುರುಗಳಿಗೆ ಅತ್ಯಂತ ಗೌರವ

ಅಭಿಮಾನಗಳಿಂದ ತಮ್ಮ ಮಗುವನ್ನು ದತ್ತು ಮಾಡಿಕೊಟ್ಟರು. ಇದಾದ ಎಷ್ಟೋ ದಿನಗಳ ನಂತರ ಶ್ರೀರಾಘವೇಂದ್ರಾಚಾರ್ಯರಿಗೆ ಮಕ್ಕಳಾದರು. ಶ್ರೀ ಆಚಾರ್ಯರಿಗೆ ಮಧ್ವಶಾಸ್ತ್ರದಲ್ಲಿ, ತಮ್ಮ ಗುರುಗಳಲ್ಲಿ ವಿಶೇಷವಾದ ಭಕ್ತಿ. ಅವರು ತಮ್ಮ ಶಿಷ್ಯರಿಗೆ ಪಾಠ ಹೇಳುವಾಗ ಪ್ರತಿನಿತ್ಯ ತುಂಬಾ ಕೃತಜ್ಞತೆಯಿಂದ ತಮ್ಮ ಗುರುಗಳನ್ನು ನೆನೆಯುತ್ತಿದ್ದರಂತೆ. ಪೂಜ್ಯ ಶ್ರೀರಾಘವೇಂದ್ರಾಚಾರ್ಯರು ತುಂಬಾ ದೊಡ್ಡ ಪಂಡಿತರಾಗಿದ್ದರೂ ಅವರಲ್ಲಿನ ವಿನಯ ವಿದ್ಯೆಗೆ ಭೂಷಣವಾಗಿದ್ದಿತು. ಎಲ್ಲಾ ಮಠಾಧಿಪತಿಗಳಿಂದಲೂ ಆಗಿನ ಕಾಲದಲ್ಲಿ ಮೊಟ್ಟ ಮೊದಲ ಗೌರವ ಇವರಿಗೆ ಮೀಸಲಾಗಿತ್ತು. ಅದನ್ನು ಅವರು ತುಂಬಾ ನಮ್ರತೆಯಿಂದಲೇ ಸ್ವೀಕರಿಸುತ್ತಿದ್ದರು. ಅವರ ಶಿಷ್ಯರೇ ಪ್ರಕಾಂಡ ಪಂಡಿತರಾಗಿದ್ದರು. ಚಿಕ್ಕ ವಯಸ್ಸಿನಿಂದಲೇ ಶ್ರೀ ಆಚಾರ್ಯರಿಂದ ಅಶನ ವಸತಿ, ವಿದ್ಯಾವನ್ನು ಪಡೆದವರಲ್ಲಿ, ಶ್ರೀ ಎಳತ್ತೂರು ಕೃಷ್ಣಾಚಾರ್ಯರು, ಶ್ರೀಧಾರಾಪುರಂ ಶ್ರೀಕೃಷ್ಣಮೂರ್ತಾ ಚಾರ್ಯರು, ಶ್ರೀಕಾಶೀಪ್ರಾಣೇಶಾಚಾರ್ಯರು, ಶ್ರೀ ಪೆರಿಯಾಕುಳಂ ರಾಮಚಂದ್ರಾಚಾರ್ಯರು, ಶ್ರೀ ದೊಡ್ಡಬಳ್ಳಾಪುರಂ ವಾಸುದೇವಚಾರ್ಯರು, ಶ್ರೀಮದುರೈ ಶ್ರೀನಿವಾಸಚಾರ್ಯರು. ಶ್ರೀ ಕಲ್ಯಾಣಿ ಶ್ರೀನಿವಾಸಾಚಾರ್ಯರು, ಮನೆಯ ಮುಂದೆ ಗುರುಕುಲ ಎಂಬ ಯಾವುದೇ ಫಲಕ ಗಳಿಲ್ಲದೇ ಎಲೆಯ ಮರೆಯ ಕಾಯಿಯಂತೆ ಯಾವ ಆಡಂಬರ ಇಲ್ಲದೇ ಜೀವನ ನಡೆಸಿದವರು.

ಔದಾರ್ಯದಲ್ಲಿ ಹೆಸರುವಾಸಿಯಾಗಿದ್ದರೂ, ಅನೇಕ ಮಠಾಧಿಪತಿಗಳಿಂದ ಭಾರಿ ಶಾಲುಗಳನ್ನು ಪಡೆದಿದ್ದರೂ, ಅವರು ಈ ಶಾಲುಗಳನ್ನೆಲ್ಲಾ ತಮ್ಮ ಶಿಷ್ಯರುಗಳಿಗೆ ಹೊದಿಸುತ್ತಿದ್ದರೇ ಹೊರತು, ಒಂದು ದಿನವೂ ತಾವು ಶಾಲು ಹೊದ್ದಿರಲಿಲ್ಲ. ಮೊಟ್ಟ ಮೊದಲಿಗೆ ಅದ್ವೈತ ಪಂಡಿತರಾದ ಶ್ರೀ ಅನಂತಕೃಷ್ಣ ಶಾಸ್ತ್ರಿಗಳು ಶ್ರೀ ಆಚಾರ್ಯರಲ್ಲಿ ವಿಚಾರ ವಿನಿಮಯ ಮಾಡಿ ತಮ್ಮ ವಿಶೇಷ ಗೌರವವನ್ನು ಅರ್ಪಿಸಿದ್ದರು.

ಬಡವರ ಅನೇಕ ಮದುವೆ-ಮುಂಜಿಗಳು ಕೊಡಗೈಯವರಾದ ಅವರ ಮನೆಯಲ್ಲೇ ನಡೆದಿದ್ದವು. ಅವರ ಮನೆ ಮೈಸೂರಿನ ಬಜ್ಜಣ್ಣಲೇನಿನಲ್ಲಿತ್ತು. ಶ್ರೀ ಆಚಾರ್ಯರಲ್ಲಿ ವಿಶೇಷ ಗೌರವದಿಂದ ಅಂದಿನ ಮುನಿಸಿಪಲ್ ಕಮೀಷನರ್‌ರವರು ಅವರಿಗೆ ''ಇನ್ನೂ ಒಂದು ನಾಲ್ಕು ಸೈಟು ಮಾಡಿಕೊಳ್ಳಿ ಎಂದಾಗ ವಿನಯದಿಂದ ನಿರಾಕರಿಸಿ ಅವನ್ನು ಬಡವರಾದ ನಮ್ಮಂತವರಿಗೆ ಕೊಡಿಸಿದರು. ಅವರು ಮಾಡಿದ ಉಪಕಾರ ನೆನೆಸಿ ದೀಪ ಹಚ್ಚುತ್ತಿದ್ದೇವೆ.

ಶ್ರೀ ಆಚಾರ್ಯರು ಶ್ರೀಜಯಾಲಯ ಮುದ್ರಣಾಲಯವನ್ನು ಸ್ಥಾಪಿಸಿ, ಅದರಲ್ಲಿ ಅನೇಕ ಮಧ್ವ ಗ್ರಂಥಗಳನ್ನು ಸಂಪಾದಿಸಿ, ಮುದ್ರಿಸಿ, ಕಡಿಮೆ ಬೆಲೆಯಲ್ಲಿ ಲಾಭವನ್ನು ಇಟ್ಟುಕೊಳ್ಳದೇ ಹಂಚಿದರು. ಅವರ ಬರೆದ ವಾಯುಸ್ತುತಿ ಮತ್ತು ಮಣಿಮಂಜರಿ ಟೀಕೆಗಳು ಇಂದಿಗೂ ಆದರ್ಶವಾಗಿದೆ. ಟೀಕೆಯನ್ನು ಹೇಗೆ ಬರೆಯಬೇಕು ಎನ್ನುವುದಕ್ಕೆ ಉದಾಹರಣೆಗಳಾಗಿವೆ. ಮೈಸೂರಿನ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ (ಪ್ರಾಚೀನ ಗ್ರಂಥ ಸಂಶೋಧನಾಲ ಯದ) ಕ್ಯೂರೈಟರ್ ಆಗಿ, ಸ್ವತಃ ತಾವೇ ಶ್ರೀಮದಾಚಾರ್ಯರ ಭಾಷ್ಯವನ್ನು ಸಂಗ್ರಹಿಸಿದರು.

ಎಲ್ಲಾ ಮತದ ವಿದ್ವಾಂಸರುಗಳಿಂದ ಗೌರವಗಳನ್ನು ಪಡೆದು ವಿದ್ವನ್ ಮಣಿಗಳಾಗಿ ಆದರ್ಶ ಪಂಡಿತರಾಗಿದ್ದರು. ಆಚಾರ, ವ್ಯವಹಾರ ವಿಚಾರ ಎಲ್ಲದರಲ್ಲೂ ಶುದ್ಧವಾಗಿದ್ದರು. ನಿರ್ಮಲ ಚರಿತರಾಗಿದ್ದರು. ನೋಡಿದವರು ಅವರೊಂದಿಗೆ ಮಾತನಾಡಿದವರು ''ಇಂತಹವರು ಪ್ರಪಂಚದಲ್ಲಿ ಇದ್ದಾರಲ್ಲ ಆದ್ದರಿಂದಲೇ ಮಳೆ ಬೆಳೆ'' ಎಂದುಕೊಂಡು ಇವರ ನೂರರಲ್ಲಿ ಒಂದು ಅಂಶವಾದರೂ ಯಾರಾದರೂ ನಮ್ಮ ವಂಶದಲ್ಲಿ ಹುಟ್ಟಿದರೆ ನಮ್ಮ ಹಿರಿಯರ ಪುಣ್ಯ ಎಂದುಕೊಳ್ಳುತ್ತಿದ್ದರು.

''ಬಹುರತ್ನಾ ವಸುಂಧರಾ'' ಎಷ್ಟೋ ರತ್ನಗಳಿರುವ ಪ್ರಪಂಚ ಸಜ್ಜನರಿಗೆ ಮಾರ್ಗದರ್ಶನ ಮಾಡಲು, ಆಗೊಮ್ಮೆ ಈಗೊಮ್ಮೆ ಪ್ರಪಂಚದಲ್ಲಿ ಹುಟ್ಟಿ ಎಲೆ ಮರೆ ಕಾಯಿಯಂತಿದ್ದು ಸರಿಯಾಗಿ ನಡೆದು ಮಾರ್ಗದರ್ಶನ ಮಾಡಿ ತಮ್ಮನ್ನು ತಾವು ಉದ್ಧಾರ ಮಾಡಿಕೊಳ್ಳುವುದಲ್ಲದೇ, ಇತರರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಉದ್ಧಾರ ಮಾಡಿ, ತನ್ಮೂಲಕ ಶ್ರೀಹರಿವಾಯುಗಳ ಸೇವೆಯನ್ನು ಮಾಡಿದವರಲ್ಲಿ ಪ್ರಾತಃ ಸ್ಮರಣೀಯರಾದ ಪಂಡಿತ ಪುಂಗನೂರು ರಾಘವೇಂದ್ರಾಚಾರ್ಯರು.

ಶ್ರೀಯುವರಾಜ ಶ್ರೀಮತ್‌ಕಂಠೀರವ ನರಸಿಂಹರಾಜ ಒಡೆಯರಿಗೆ ಪುತ್ರೋತ್ಸವ ವಾದಾಗ, ಮಗುವಿಗೆ ನಾಮಕರಣ ಮಾಡಲು ಏನು ಹೆಸರು ಇಡಬೇಕೆಂದು ಶ್ರೀ ಆಚಾರ್ಯರನ್ನು ಕೇಳಿದಾಗ ಆ ಸಮಯದಲ್ಲಿ ಶ್ರೀಮದ್‌ಜಯತೀರ್ಥ ರಚಿತ ಶ್ರೀಮನ್‌ನ್ಯಾಯಸುಧಾ ಪ್ರವಚನ ನಡೆಯುತ್ತಿತ್ತು. ಅದಕ್ಕೆ ಜಯ ಎಂಬ ಹೆಸರನ್ನು ಇಡಲು ಹೇಳಿಕಳುಹಿಸಿದರಂತೆ, ಇದಕ್ಕೆ ಆ ಮಗುವಿಗೆ ಶ್ರೀ ಜಯಚಾಮರಾಜ ಒಡೆಯರೆಂದು ನಾಮಕರಣ ಮಾಡಿದರು. ಮೈಸೂರು ಶ್ರೀಮನ್‌ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ ಅರಮನೆ ಧರ್ಮಾಧಿಕಾರಿಗಳಾಗಿ ಅವರಿಂದ ತುಂಬಾ ಗೌರವ ಆದರಗಳಿಂದ ಪಂಡಿತ ರತ್ನಂ ಬಿರುದು ಬಂಗಾರದ ತೋಡಗಳನ್ನು ಪಡೆದ ಮಹನೀಯರು. ಆದರೆ ಅಷ್ಟೇ ವಿರಕ್ತರು, ಮಹಾರಾಜರು ಮನೆಯ ದಾನ ಕೊಡುತ್ತೇನೆ, ಸ್ವೀಕರಿಸಬೇಕು ಅಂತ ಪ್ರಾರ್ಥಿಸಿದಾಗ ನನಗೆ ಮನೆ ಶ್ರೀ ಹರಿ ಕೊಟ್ಟಿರುತ್ತಾನೆ ಸಾಕು ಅಂತ ಹೇಳಿ ಅದನ್ನು ಸ್ವೀಕರಿಸಲಿಲ್ಲ. ಇದು ಅವರ ವೈರಾಗ್ಯ ''ಯದೃಚ್ಛಾಲಾಭ ಸಂತುಷ್ಟತೆ, ಅಲಂಬುದ್ಧಿ ತ್ಯಾಗದ ಸ್ವಭಾವ ಕಾರ್ಯತಃ ಕಂಡುಬಂದಿದೆ'' ಹೀಗಿದ್ದರೇ ದೇವರು ಒಲಿಯುವುದು ಖಂಡಿತ. ಇದು ಪಂಡಿತಪಾಮರರಿಂದ ಅನುಕರಣೀಯವಾದುದು.

## ಶ್ರೀಬಾಳಗಾರು ಶ್ರೀನಿವಾಸಾಚಾರ್ಯರು

ಬಾಣಾಕಾರ ಕ್ಷೇತ್ರವೆಂದೇ ಪ್ರಸಿದ್ಧವಾದ ಬಾಳಗಾರು ಎಂಬ ಗ್ರಾಮದಲ್ಲಿ ಸಾಧಕಜೀವನ ನಡೆಸಿದ ತೀರ್ಥಾಚಾರ್ಯವಂಶದವರಾದ ಸುಬ್ಬಣ್ಣಾಚಾರ್ಯರು ಹಾಗೂ ಕಾವೇರೀಬಾಯಿ ದಂಪತಿಗಳ ದ್ವಿತೀಯ ಕುಮಾರರಾಗಿ, ಹರಿ-ವಾಯು-ಗುರುಗಳ ಅದ್ವಿತೀಯ ಅನುಗ್ರಹ ಮೂರ್ತಿಗಳೇ ಈ ಶ್ರೀ ಬಾಳಗಾರು ಆಚಾರ್ಯರು. ಶ್ರೀಮತ್ ಉತ್ತರಾದಿ ಮಠಾಧೀಶರಾದ ಶ್ರೀ

ಸತ್ಯಧ್ಯಾನ ತೀರ್ಥರ ಪ್ರಿಯಶಿಷ್ಯರೂ ಪಂಡಿತರಾಜ ಇತ್ಯಾದಿ ಬಿರುದಾಂಕಿತರೂ ಆದ ಪರಮ ಪೂಜ್ಯ ಶ್ರೀ ಜಾಲಿಹಾಳ ಶ್ರೀನಿವಾಸಾಚಾರ್ಯರ ಕರುಣಾದೃಷ್ಟಿ ಇವರ ಜೀವನದ ರೂಪವನ್ನೇ ಬದಲಿಸಿಬಿಟ್ಟಿತು. ಆಚಾರ್ಯರ ಅಚ್ಚುಮೆಚ್ಚಿನ ಶಿಷ್ಯರಾಗಿ ನ್ಯಾಯವೇದಾಂತಾದಿ ಶಾಸ್ತ್ರಗಳ ತಳಸ್ಪರ್ಶಿ ಪಾಂಡಿತ್ಯವನ್ನು ಪಡೆದ ಶ್ರೀ ಬಾಳಗಾರು ಆಚಾರ್ಯರು ವಿದ್ಯೆಯನ್ನು ಹರಿವಾಯು ಗುರುಗಳ ಸೇವೆಗಾಗಿ ಮುಡುಪಿಟ್ಟ ಶಿಷ್ಟಾಚಾರ ಸಂಪನ್ನರು. ವೈದಿಕಸನ್ಮಾರ್ಗ ದೀಕ್ಷಿತರು. ಅದರಂತೇ ತಮ್ಮ ಶಿಷ್ಯರನ್ನೂ ಪುತ್ರರನ್ನೂ ಸನ್ಮಾರ್ಗದಲ್ಲಿ ಮುನ್ನಡೆಸುವ ಮಹನೀಯರು. ಧರ್ಮನಿಷ್ಠುರರಾದರೂ ಎಲ್ಲರಿಗೂ ಇಷ್ಟವಾಗುವ ಹೃದಯವಂತರು. ಬೆಂಗಳೂರಿನಲ್ಲಿ ಶ್ರೀ ಬಾಳಗಾರು ಆಚಾರ್ಯರಿಂದ ಮಾತು ಕೃತಿಯಲ್ಲಿ ಪರ್ಯವಸಿತವಾಗುವಂತೆ, ಉಂಟಾದ ಜ್ಞಾನಕ್ರಾಂತಿಗೆ ಶಿಖಾದಿ ಮಂಡಿತರಾಗಿ ಸದಾಚಾರ ಸಂಪನ್ನರಾಗಿ ಮಧ್ವಾಚಾರ್ಯರ ದಿವ್ಯಸೇವೆಗೆ ನೂರಾರು ಮಾಧ್ವ ಜನತೆ ಇಂದಿಗೂ ಸಾಧನತತ್ಪರರಾಗಿರವುದೇ ಸಾಕ್ಷಿಯು. ಅನನ್ಯ ಮಾಧ್ವ ದೀಕ್ಷೆಯು ಸನಾತನ ಧರ್ಮ ನಿಷ್ಠೆಯು ಆಚಾರ್ಯರಿಗೆ ಗುರುಗಳಾದ ಜಾಲಿಹಾಳಾಚಾರ್ಯರು ಅನುಗ್ರಹಿಸಿರುವ ದಿವ್ಯ ಆಸ್ತಿ. ಆದ್ದರಿಂದ ಮಾಧ್ವ ಅವಹೇಳನಾತ್ಮಕವಾಗಿ ಯಾವುದೇ ಕೃತಿ ಪ್ರಕಾಶಿತವಾದರೂ ಸರಿ ಅದಕ್ಕೆ ಆಚಾರ್ಯರ ವಿಮರ್ಶೆ ಸಹಜಸಿದ್ಧವು. ಅದರಂತೆಯೇ,

ಸಭಾಸಾರವೈಭವಮ್
ಮಾಧ್ವಸ್ತುತಿಃ
ಮಣಿಮಂಜರೀವೈಭವಮ್

ಈ ಕೃತಿಗಳು ರೂಪಪಡೆದಿವೆ. ತಮ್ಮ ಪಾಡಿಗೆ ತಮ್ಮ ಸಾಧನೆಯೇ ಮುಖ್ಯವೆಂಬ ಧ್ಯೇಯೋದ್ದೇಶದಿಂದ ಜೀವನ ನಡೆಸುವ ಪೂಜ್ಯ ಆಚಾರ್ಯರಿಂದ ಅನೇಕ ಜನರು ಉದ್ಧೃತ ರಾಗಿದ್ದಾರೆ. ಗುರುಕುಲದ ವಾತಾವರಣ ಇಂದಿಗೂ ಕಾಣಬೇಕಾದರೆ ಪೂಜ್ಯ ಆಚಾರ್ಯರ ಮನೆಯೇ ದಾರಿಯು. ಆಚಾರ್ಯರ ಅನೇಕ ಗುಣಗಳಲ್ಲಿ ಗುರುಭಕ್ತಿಯು ಅನನ್ಯವಾದುದು. ಪೂಜ್ಯ ಗುರುಗಳಾದ ಜಾಲಿಹಾಳಾಚಾರ್ಯರ ಬಗ್ಗೆ ಪ್ರವಚನಮಂಗಳದಲ್ಲಿ ಬಾಳಗಾರು ಆಚಾರ್ಯರ ಮಾತು ಕೇಳುವಾಗ ಎಲ್ಲರೂ ಮೈಮರೆತಿರುವುದೇ ಇದಕ್ಕೆ ಸಾಕ್ಷಿ. ಇಂಥಾ ಪೂಜ್ಯ ಆಚಾರ್ಯರ ಬಗ್ಗೆ ಹೆಚ್ಚು ಹೇಳಲು ನಾ ಅಲ್ಪನೆಂದು ಭಿನ್ನಹಿಸಿ ಸುಜನರಿಗೆಲ್ಲ ವಂದಿಸುವೆ.

**ಶ್ರೀ ದ್ವಾರಕಾನಾಥ್**
ತ್ರೈಲೋಕ್ಯಾಚಾರ್ಯಸೇವಕವೃಂದ

|| ಶ್ರೀಃ ||

# ಪೀಠಿಕೆ

''ಮಣಿಮಂಜರೀ'' ಎಂದು ಪ್ರಸಿದ್ಧವಾದ ಈ ಕಾವ್ಯರತ್ನವು ಶ್ರೀಮನ್ನಾರಾಯಣ ಪಂಡಿತಾಚಾರ್ಯರಿಂದ ರಚಿತವಾದುದು. ಈ ಪಂಡಿತಾಚಾರ್ಯರು ಶ್ರೀಮತ್ತ್ರಿವಿಕ್ರಮಾಚಾರ್ಯರ ಮಕ್ಕಳು. ಈ ತ್ರಿವಿಕ್ರಮಪಂಡಿತಾಚಾರ್ಯರು ಶ್ರೀಮದಾನಂದತೀರ್ಥ ಭಗವತ್ಪಾದರ ಕೂಡ ಸ್ಪರ್ಧಾಪೂರ್ವಕವಾಗಿ ಅನೇಕ ಶಾಸ್ತ್ರಗಳಲ್ಲಿ ಹದಿನೈದು ದಿವಸಗಳವರೆಗೂ ವಾದಗಳನ್ನು ಮಾಡಿ ಕೊನೆಗೆ ಪರಾಜಿತರಾಗಿ ಭಗವತ್ಪಾದರ ಶಿಷ್ಯತ್ವವನ್ನು ಅವಲಂಬಿಸಿ, ಭಗವತ್ಪಾದರು ಮಾಡಿದ ಶ್ರೀಮದ್ಬ್ರಹ್ಮಸೂತ್ರಭಾಷ್ಯಕ್ಕೆ 'ತತ್ತ್ವಪ್ರದೀಪ' ಎಂಬ ವ್ಯಾಖ್ಯಾನವನ್ನು ರಚಿಸಿದರೆಂಬುದು ಶ್ರೀಮನ್ಮಧ್ವವಿಜಯದ ಹದಿನೈದನೆಯ ಸರ್ಗದಲ್ಲಿ ಸ್ಪಷ್ಟವು. ಅಲ್ಲದೆ ಇವರು ಶ್ರೀಮದಾಚಾರ್ಯರ ಜೊತೆಗೆ ಸಂಚಾರ ಮಾಡುತ್ತಿರುವಾಗ ಚಿಕ್ಕ ಬದರೀಕ್ಷೇತ್ರದಲ್ಲಿ ಶ್ರೀನಾರಾಯಣದೇವರ ಆಲಯದಲ್ಲಿ ಸ್ವಾಮಿಯನ್ನು ಆಚಾರ್ಯರು ಪೂಜಿಸುತ್ತಿರುವಾಗ ಶ್ರೀಮದಾಚಾರ್ಯರ ಶರೀರದಲ್ಲಿ ಶ್ರೀಹನುಮದ್ಭೀಮರ ಲಕ್ಷಣಗಳನ್ನು ಕಂಡು ಶ್ರೀಮದಾಚಾರ್ಯರು ಶ್ರೀಹನುಮದ್ಭೀಮರೂಪಗಳನ್ನು ಧರಿಸಿದ ಶ್ರೀ ವಾಯುದೇವರ ಮೂರನೆಯ ಅವತಾರರೆಂದು ನಿಶ್ಚಯಿಸಿ ಆಚಾರ್ಯರ ವಿಷಯದಲ್ಲಿ ಶ್ರೀಹರಿವಾಯುಸ್ತುತಿಯನ್ನು ರಚಿಸಿರುತ್ತಾರೆಂಬುದು ನಮ್ಮ ಹರಿವಾಯುಸ್ತುತಿ ವ್ಯಾಖ್ಯಾನದ ಪೀಠಿಕೆಯಲ್ಲಿ ವ್ಯಕ್ತವಾಗಿದೆ.

ಶ್ರೀಮನ್ನಾರಾಯಣಪಂಡಿತಾಚಾರ್ಯರು ತಮ್ಮ ತಂದೆಗಳ ಜೊತೆಗೆ ಭಗವತ್ಪಾದರ ಕೂಡ ಇದ್ದು ಪ್ರತ್ಯಕ್ಷದಿಂದಲೂ ತಮ್ಮ ತಂದೆಗಳು ಮೊದಲಾದ ಹಿರಿಯರ ಉಪದೇಶದಿಂದಲೂ ಶ್ರೀಭಗವತ್ಪಾದರ ಮಾಹಾತ್ಮ್ಯಗಳನ್ನು ಚೆನ್ನಾಗಿ ಅರಿತು 'ಶ್ರೀಮನ್ಮಧ್ವವಿಜಯ' ಎಂಬ ಮಹಾಕಾವ್ಯ ದಲ್ಲಿ ಶ್ರೀಮದಾಚಾರ್ಯರ ಚರಿತ್ರವನ್ನು ವಿಸ್ತಾರವಾಗಿ ವರ್ಣಿಸಿರುತ್ತಾರೆ. ಶ್ರೀಮನ್ಮಧ್ವವಿಜಯದ ಪ್ರಥಮಸರ್ಗದ ಕೊನೆಯಲ್ಲಿ ಹೇಳಿರುವ ಪ್ರಕಾರ ಶ್ರೀಮದ್ವೈಷ್ಣವ ಸಿದ್ಧಾಂತಕ್ಕೆ ವಿರೋಧಿಯಾದ ಮತಾಂತರಗಳ ಪ್ರವೃತ್ತಿ ಪ್ರಕಾರವನ್ನು ಸೃಷ್ಟ್ಯಾದಿಯಿಂದಲೂ ವಿವರಿಸುವುದಕ್ಕಾಗಿ ಈ ''ಮಣಿಮಂಜರೀ'' ಎಂಬ ಗ್ರಂಥವನ್ನು ರಚಿಸಿರುವರು. ಈ ಗ್ರಂಥವು ಎಂಟು ಸರ್ಗಗಳುಳ್ಳ ದ್ದಾಗಿದೆ. ಸುಲಭಶೈಲಿಯಿಂದ ಅವಶ್ಯಜ್ಞಾತವ್ಯವಾದ ಪ್ರಮೇಯಗಳೆಂಬ ಮಣಿಗಳನ್ನು ತಿಳಿಸುವ ಮಂಜರಿಯಾಗಿರುವುದರಿಂದ ಈ ಕಾವ್ಯಕ್ಕೆ ಈ ನಾಮವು ಅನುಗುಣವಾಗಿದೆ.

ಶ್ರೀಮನ್ನಾರಾಯಣ ಪಂಡಿತಾಚಾರ್ಯರ ದೇಶಕಾಲಾದಿ ವ್ಯವಸ್ಥೆಯು ವಾಯುಸ್ತುತಿ ವ್ಯಾಖ್ಯಾನದಿಂದ ತಿಳಿಯಬರಬಹುದು. ಆದುದರಿಂದ ಇಲ್ಲಿ ವಿವರಿಸಲ್ಪಡುವುದಿಲ್ಲ. ಆದರೆ ಕೆಲವರು, ಈ ಮಣಿಮಂಜರಿಯಲ್ಲಿ ಸ್ವಕಪೋಲ ಕಲ್ಪಿತಗಳಾದ ಮತಾಂತರಸ್ಥಾಪಕಾಚಾರ್ಯರ

ದೂಷಣ ವೃತ್ತಾಂತಗಳು ಹೆಚ್ಚಾಗಿರುತ್ತವಾದುದರಿಂದ ಈ ಗ್ರಂಥವು ಬಾಲಕರಿಗೆ ದ್ವೇಷಾ ಸೂಯಾದಿಗಳನ್ನು ಹುಟ್ಟಿಸುತ್ತದಾದಕಾರಣ ಕೇವಲ ಬಾಲ್ಯದಲ್ಲಿ ವ್ಯಾಸಂಗಕ್ಕೆ ಅರ್ಹವಲ್ಲವೆಂದು ಆಕ್ಷೇಪಿಸುತ್ತಾರೆ. ಈ ಆಕ್ಷೇಪವು ಯುಕ್ತವಲ್ಲ. ಈ ಗ್ರಂಥದಲ್ಲಿ ಹೇಳಲ್ಪಟ್ಟಿರುವ ವೃತ್ತಾಂಗಳೆಲ್ಲವು ಸ್ವಪರ ಸಮ್ಮತವಾದ ಆಧಾರಗಳನ್ನುಂಟಾಗಿರುತ್ತವಾದುದರಿಂದ ಇದು ಅನಾದರಕ್ಕರ್ಹವಲ್ಲವೆಂದು ತೋರಿಸುವುದಾವಶ್ಯಕವಾಗಿದೆ. ಅದು ಹೇಗೆಂದರೆ :-

**1ನೆಯ ಸರ್ಗದಲ್ಲಿ** - ಮಂಗಳಾಚರಣೆಯು, ಶ್ರುತ್ಯಾದಿ ಸಮ್ಮತವಾದ ಸೃಷ್ಟಿಸಂಗ್ರಹವು, ಸೂರ್ಯಪುತ್ರನಾದ ವೈವಸ್ವತಮನುವಿನ ವಂಶದಲ್ಲಿ ಇಕ್ಷ್ವಾಕು ಮೊದಲುಗೊಂಡು ದಶರಥಾಂತ ರಾಜರ ಜನನವು ಅನಂತರ ರಾಮಾವತಾರವು, ಜನಸ್ಥಾನದಲ್ಲಿ ಖರದೂಷಣಾದಿ ಸಂಹಾರ ಪರ್ಯಂತ ರಾಮಕಥೆಯು ನಿರೂಪಿತವಾಗಿದೆ. ಇವುಗಳಲ್ಲಿ ಆವದಾದರೂ ನಿರಾಧಾರವಾಗಿ ರುವುದಿಲ್ಲ. ರಾಮಚರಿತ್ರೆಯ ವಿಷಯದಲ್ಲಿ ರಾಮಾಯಣಾದಿಗಳೇ ಪ್ರಮಾಣಗಳಾಗಿರುತ್ತವೆ.

**2ನೆಯ ಸರ್ಗದಲ್ಲಿ** - ರಾವಣನು ಸೀತಾಪ್ರತಿಕೃತಿಯ ಅಪಹಾರ ಮಾಡಿದುದನ್ನಾರಂಭಿಸಿ ಶ್ರೀರಾಮಚರಿತ್ರ ವೆಲ್ಲವು ಸಂಗ್ರಹಿಸಲ್ಪಟ್ಟಿದೆ. ಇವೆಲ್ಲವೂ ರಾಮಾಯಣಾದಿಗಳಿಂದೇ ಸಿದ್ಧವಾದುದರಿಂದ ನಿಷ್ಪ್ರಮಾಣಗಳಲ್ಲ.

**3ನೆಯ ಸರ್ಗದಲ್ಲಿ** - ಚಂದ್ರನದೆಸೆಯಿಂದ ಯದುಕುರುಗಳ ವಂಶದ ಅಭಿವೃದ್ಧಿಯು, ವಸುದೇವನ ದೆಸೆಯಿಂದ ಕೃಷ್ಣಾವತಾರವು, ಶ್ರೀಕೃಷ್ಣನಿಗೆ ವಯಃ ಕ್ರಮದಿಂದ ಗೋಪಾಲಕತ್ವ ಪ್ರಾಪ್ತಿಪರ್ಯಂತ ಕಥೆಯು ಸಂಗ್ರಹದಿಂದ ಹೇಳಲ್ಪಟ್ಟಿದೆ. ಈ ಸರ್ಗದ ವಿಷಯವು ಭಾಗವತಾದಿ ಪುರಾಣಗಳಲ್ಲಿಯು, ಮತ್ತು ಹರಿವಂಶದಲ್ಲಿಯು ಹೇಳಿರುವುದರಿಂದ ಕಲ್ಪಿತವೆಂದು ಹೇಳಲಾಗು ವುದಿಲ್ಲ.

**4ನೆಯ ಸರ್ಗದಲ್ಲಿ** - ಅವಶಿಷ್ಟ ಕೃಷ್ಣಚರಿತ್ರೆಯು, ಕುರುಪಾಂಡವರುಗಳ ಯುದ್ಧಾಂತಕಥೆಯು, ಶ್ರೀಕೃಷ್ಣನ ಮತ್ತು ಪಾಂಡವರ ಸ್ವಲೋಕಪ್ರಾಪ್ತಿಯು, ದುರ್ವಾಸರು ಮೊದಲಾದವರಿಗೆ ತತ್ತ್ವೋಪದೇಶದಲ್ಲಿ ಅಧಿಕಾರಪ್ರದಾನವು, ಪರಿಕ್ಷಿದ್ರಾಜನಿಗೆ ರಾಜತ್ವವು ನಿರೂಪಿತವಾಗಿದೆ. ಇವುಗಳೆಲ್ಲವು ಭಾರತ-ಭಾಗವತ-ಹರಿವಂಶಾದಿಗಳಲ್ಲಿ ಪ್ರತಿಪಾದಿತವಾಗಿರು ವುದರಿಂದ ನಿರಾಧಾರವಲ್ಲ.

**5ನೆಯ** ಸರ್ಗದಲ್ಲಿ- ಶ್ರೀಕೃಷ್ಣಾಜ್ಞಾನುಸಾರವಾಗಿ ಶ್ರೀವ್ಯಾಸಾಶ್ರಯದಿಂದ ಶ್ರೀದೂರ್ವಾಸರು ಮೊದಲಾದವರು ಸತ್ಸಿದ್ಧಾಂತ ಪ್ರವರ್ತನವನ್ನು ಮಾಡುತ್ತಿರುವಾಗ ಶ್ರೀಕೃಷ್ಣ ಭೀಮದ್ವೇಷಿಗಳಾದ ದೈತ್ಯರೆಲ್ಲರು ಸೇರಿ ಕೃಷ್ಣಭೀಮರಿಗೆ ಸಮ್ಮತವಾದ ಸತ್ಸಿದ್ಧಾಂತವನ್ನು ಕೆಡಿಸಲು ಉಪಾಯಗಳನ್ನಾಲೋಚಿಸಿ, ಭೀಮಸೇನನಿಂದ ಸೌಗಂಧಿಕಾಹರಣ ಕಾಲದಲ್ಲಿ ಚಿತ್ರವಧೆಯನ್ನು ಹೊಂದಿದ ಕಾರಣ ತತ್ಪ್ರತಿಕ್ರಿಯೆಯನ್ನು ಮಾಡಬೇಕೆಂದು ಇಚ್ಛಿಸುತ್ತಿದ್ದ ಮಣಿಮಂತನೆಂಬ ದೈತ್ಯನಿಗೆ

ಭೂಮಿಯಲ್ಲಿ ಬ್ರಾಹ್ಮಣರೂಪದಿಂದ ಅವತರಿಸಿ ದುಶ್ಶಾಸ್ತ್ರವನ್ನು ನಿರ್ಮಾಣಮಾಡಲು ಅಜ್ಞೆಯನ್ನಿತ್ತರೆಂತಲು, ಆ ಸಮಯದಲ್ಲಿ ಬೌದ್ಧಶಾಸ್ತ್ರವು ಪ್ರಬಲವಾಗಿ ವರ್ಣಾಶ್ರಮಧರ್ಮಗಳಿಗೆ ಹಾನಿಯನ್ನುಂಟು ಮಾಡಿತೆಂತಲು, ಆ ಸಮಯದಲ್ಲಿ ಗೋವಿಂದಭಟ್ಟನೆಂಬ ಪಂಡಿತನಾದ ಬ್ರಾಹ್ಮಣನು ಚತುರ್ವರ್ಣಗಳ ಕನ್ಯಕೆಗಳನ್ನು ವಿವಾಹಮಾಡಿಕೊಂಡು, ಅವರಲ್ಲಿ ಕ್ರಮವಾಗಿ ಶಬರ, ವಿಕ್ರಮಾದಿತ್ಯ, ಹರಿಶ್ಚಂದ್ರ, ಭರ್ತೃಹರಿ ಎಂಬ ನಾಲ್ಕು ಮಕ್ಕಳನ್ನು ಪಡೆದು ಕೊನೆಗೆ ವಿರಕ್ತನಾಗಿ ಭೂಸಂಚಾರವನ್ನು ಮಾಡಿದನೆಂತಲು, ಶಬರನು ಜೈಮಿನಿಸೂತ್ರಗಳಿಗೆ ಭಾಷ್ಯವನ್ನು ರಹಸ್ಯವಾಗಿ ಮಾಡಿದನೆಂತಲು, ವಿಕ್ರಮಾದಿತ್ಯನು ಭೂಮಿಯನ್ನಾಳಿದನೆಂತಲು, ಹರಿಶ್ಚಂದ್ರನು ದೇವತಾಪ್ರಸಾದ ದಿಂದ ಆಯುರ್ವೇದದಲ್ಲಿ ಅಸದೃಶಪಾಂಡಿತ್ಯವನ್ನು ಹೊಂದಿದನೆಂತಲು, ಶೂದ್ರಾಪುತ್ರನಾದ ಭರ್ತೃಹರಿಯು ಬ್ರಾಹ್ಮಣಾನುಗ್ರಹದಿಂದ ಯಜ್ಞತತ್ತ್ವವನ್ನು ಅರಿತು ಭೂಸಂಚಾರ ಮಾಡಿದ ನೆಂತಲು, ಬ್ರಾಹ್ಮಣಪುತ್ರನಾದ ಶಬರನಿಗೆ ಭಟ್ಟಕುಮಾರನು ಭಟ್ಟನಾರಾಯಣನೆಂದು ಇಬ್ಬರು ಮಕ್ಕಳಾದರೆಂತಲು, ಅವರಲ್ಲಿ ಕುಮಾರಭಟ್ಟರೆಂದು ಪ್ರಸಿದ್ಧರಾದ ಕುಮಾರಿಲಭಟ್ಟರು ಆಗ ಬೌದ್ಧಪಂಡಿತನೊಬ್ಬನಲ್ಲಿ ಭೌದ್ಧಶಾಸ್ತ್ರವನ್ನು ಕಲಿಯುತ್ತಿದ್ದು ವೇದದೂಷಣೆಯನ್ನು ಕೇಳಲಾರದೆ ಸುರಿಸಿದ ಕಣ್ಣೀರು ಆ ಗುರುವಿನ ಪಾದದಲ್ಲಿ ಬಿದ್ದು ಅತ್ಯುಷ್ಣವಾಗಿದ್ದುದರಿಂದ ಆ ಬೌದ್ಧಗುರುವು ಕುಮಾರಿಲಭಟ್ಟರನ್ನು ಸಂಹರಿಸಲು ಅಪ್ಪಣೆ ಮಾಡಲು, ಕುಮಾರಿಲಭಟ್ಟರು ತಾವೇ ಆ ಉಪ್ಪರಿಗೆಯಿಂದ ನೆಲಕ್ಕೆ ದುಮುಕಿದರೆಂತಲು, ಕೆಲವುದಿನಗಳ ಮೇಲೆ ಅವರು ಅವರ ತಮ್ಮಂದಿರು ನಾರಾಯಣಭಟ್ಟರು ಕಲೆತು, ಬೌದ್ಧರಾಜನ ಭೇಟಿಯನ್ನು ಮಾಡಿ ತಮಗೂ ಬೌದ್ಧರರಿಗೂ ವಿಚಾರವನ್ನು ಮಾಡಿಸಬೇಕೆಂದು ಪ್ರಾರ್ಥಿಸಿ, ಸೋತವರನ್ನು ಅಗ್ನಿಪ್ರವೇಶ ಮಾಡಿಸುವಂತೆ ವ್ಯವಸ್ಥೆಯನ್ನು ಮಾಡಿಸಿ, ವಿಚಾರ ನಡೆಯಲು ಬೌದ್ಧರನ್ನು ಜಯಿಸಿದರೆಂತಲು, ವ್ಯವಸ್ಥಾನುಸಾರವಾಗಿ ರಾಜನು ಬೌದ್ಧರಲ್ಲಿ ಅನೇಕರನ್ನು ಬೆಂಕಿಯಲ್ಲಿ ಸುಡಿಸಲು, ಅನೇಕರು ವೇಷಾಂತರಗಳನ್ನು ಧರಿಸಿ ದ್ವೀಪಾಂತರಗಳನ್ನು ಸೇರಿದರೆಂಬ ಕಥೆಯು ಹೇಳಲ್ಪಟ್ಟಿದೆ.

ಇದರಲ್ಲಿ ಗೋವಿಂದಭಟ್ಟರ ಸಂತತಿಯು, ಅವರ ಮಕ್ಕಳುಗಳಾದ, ಶಬರಾದಿಗಳ ವೃತ್ತಾಂತವು, ಕುಮಾರಿಲಭಟ್ಟರ ವಿಜಯಕಥೆಯು ಸ್ವಲ್ಪ ಹೆಚ್ಚುಕಡಿಮೆಯಾಗಿ ಸರ್ವರಿಗೂ ಈಗಿನ ಚರಿತ್ರ ಗ್ರಂಥಗಳಿಂದಲು, ಕೆಲವು ಸಂಸ್ಕೃತ ಗ್ರಂಥಗಳಿಂದಲು ಸುಪ್ರಸಿದ್ಧವಾಗಿ ತಿಳಿದುದಾಗಿಯೆ ಇದೆ. ಆದುದರಿಂದ ಆ ವಿಷಯಗಳಲ್ಲಿ ಆಧಾರಗಳನ್ನು ತೋರಿಸುವುದು ಅನಾವಶ್ಯಕವು. ಇನ್ನು ಸರ್ಗಾರಂಭದಲ್ಲಿ ಹೇಳಿರುವ ಪ್ರಕಾರ ದೈತ್ಯರ ಆಲೋಚನ ಪ್ರಕಾರ ವಿಷಯದಲ್ಲಿ ಮತಾಂತರದವರು ವಿವಾದ ಮಾಡಬಹುದು. ಆದರೆ ಆಗ ಆಲೋಚಿಸಿದರೆಂದು ಹೇಳಲ್ಪಟ್ಟ ವಿಷಯಗಳಲ್ಲಿ ಸೌಗಂಧಿಕಾಹರಣ ಕಾಲದಲ್ಲಿ ಭೀಮಸೇನನಿಂದ ಮಣಿಮದಾದಿದೈತ್ಯ ಸಂಹಾರವಾಯಿತೆಂಬುದು ಭಾರತಾದಿಗಳಿಂದ ಸ್ಪಷ್ಟವೆ. ಅವರಲ್ಲಿ ಮಣಿಮಂತನೆಂಬುವನು ಸಂಕರನಾಗಿ ಮಿಥ್ಯಾಶಾಸ್ತ್ರವನ್ನು ಮಾಡಿದನೆಂಬುದು ಈ ಕೆಳಗೆ ಉದಾಹರಿಸಲ್ಪಡುವ ಸ್ಕಾಂದಪುರಾಣದ ವಚನಗಳಿಂದ ಸ್ಪಷ್ಟವಾಗುತ್ತದೆ.

मणिमत्पूर्वका दुष्टाः दैत्या आसन् कलौ युगे ॥
ते कुशास्त्रं प्रकुर्वंतो हरिवायुविरोधिनः ॥
तेषां मध्ये संकरस्तु पूर्वयो मणिमान् खलः ॥
सौगंधिकवने दिव्ये भीमसेनहतोऽसुरः ॥
स क्रोधतंत्रको दुष्टो मिथ्याशास्त्रं वदन् पुनः ॥
कृष्णे भीमे च विद्वेषं कुर्वन् भूमावजायत ।
कालडिग्रामके रुद्रवराल्लोकान् विमोहयन् ॥

ಈ ವಚನಗಳಿಂದ ವಿವಾದಾಸ್ಪದಾಂಶವೆಲ್ಲ ಸಿದ್ಧವಾಗುತ್ತದೆ. ಇನ್ನು ಆಲೋಚನದಲ್ಲಿ ಸೇರಿದ ಬೌದ್ಧಾದಿ ಶಾಸ್ತ್ರಗಳ ಹೇಯತ್ವವು ಪದ್ಮಪುರಾಣದಲ್ಲಿರುವ ಕೆಳಗೆ ಬರೆಯಲ್ಪಡುವ ವಚನಗಳಿಂದ ಸಿದ್ಧವಾಗುತ್ತದೆ.

रुद्र उवाच-

''श्रुणु देवि प्रवक्ष्यामि तामसानि यथाक्रमात् ।
येषां श्रवणमात्रेण पातित्यं ज्ञानिनामपि ॥
प्रथमं हि मयैवोक्तं शैवं पाशुपतादिकम् ॥
मच्छक्त्यावेशितैर्विप्रैः संप्रोक्तानि ततःपरम् ।
कणादेन तु संप्रोक्तं शास्त्रं वैशेषिकं महत् ॥
गौतमेन तथा न्यायं सांख्यं तत्कपिलेन वै ।
धिषणेन तथा प्रोक्तं चार्वाकमतिगूहितम् ॥
दैत्यानां नाशनार्थाय हरिणा बुद्धरूपिणा ।
बौद्धशास्त्रमसत्प्रोक्तं नग्ननीलपटादिकम् ॥
मायावादमसच्छास्त्रं प्रच्छन्नं बौद्धमुच्यते ।
मयैव कथितं देवि कलौ ब्राह्मणरूपिणा ॥
मणिमान्निहतःपूर्वं भीमेन शुभबुद्धिना ॥
संजातो ब्राह्मणकुले तपसा मां प्रसाद्य वै ।
मिथ्यावादमसच्छास्त्रं चकार स तु संकरः ॥

.... .... ....

शास्त्राणीमानि गिरिजे तामसानि निबोध मे ॥''

ಈ ಪ್ರಕಾರ ಪುರಾಣಗಳಲ್ಲಿ ಉಕ್ತವಾದ ವಿಷಯಗಳೆ ಆಲೋಚನಕಾಲದಲ್ಲಿ ಅನುವಾದಿಸಲ್ಪಟ್ಟಿವೆ. ಆದುದರಿಂದ ಆಲೋಚಿತವಾಯಿತೆಂದು ಹೇಳಲ್ಪಡುವ ವಿಷಯಗಳೊಂದಾದರೂ ಅಪ್ರಾಮಾಣಿಕವೆಂದು ಹೇಳಲಾಗದು. ವಿಷಯಗಳೆಲ್ಲ ಯಥಾರ್ಥವಾಗಿರುವಾಗ ಆಲೋಚನ ಮಾತ್ರ ನಡಿಯಲಿಲ್ಲವೆಂದು ಹೇಳುವುದರಿಂದ ಪ್ರಯೋಜನವಿಲ್ಲ.

ಆದರೆ ಈ ಮೇಲೆ ಉದಾಹರಿಸಿದ ವಚನಗಳು ಸ್ಕಾಂದ ಪದ್ಮಪುರಾಣಗಳಲ್ಲಿ ವಾಸ್ತವವಾಗಿರುವುದಿಲ್ಲವೆಂತಲು, ಆರೋ ರಚಿಸಿ ಸೇರಿಸಿರಬಹುದೆಂತಲು ಪರಕೀಯರು ಹೇಳಬಹುದು. ಇದರಲ್ಲಿ ಪದ್ಮಪುರಾಣದಿಂದ ಉದ್ಧರಿಸಿದ ವಚನಗಳು ವಿಜ್ಞಾನಭಿಕ್ಷುಪ್ರಣೀತವಾದ ಯೋಗವಾರ್ತಿಕದ ಆರಂಭದಲ್ಲಿ ಗ್ರಂಥಕಾರನಿಂದ ಉದಾಹೃತವಾಗಿವೆ. ಆ ಪುಸ್ತಕವು ಮುದ್ರಿತ ವಾಗಿಯು ಇದೆ. ಆ ಗ್ರಂಥಕಾರನು ಕಲ್ಪಿತ ವಚನಗಳನ್ನೇ ಉದಾಹರಿಸಿದ್ದಾನೆಂದು ಹೇಳುವುದಾದರೆ ಆಯಾ ಮತದವರು ಹೇಳುವ ಪ್ರಮಾಣ ವಾಕ್ಯಗಳೆಲ್ಲವು ಅವರವರಿಂದ ಕಲ್ಪಿತ ವಾದುವೆಂದು ಹೇಳುವುದಕ್ಕೆ ಆಕ್ಷೇಪವೇನು? ಇಂತಹ ವಿವಾದವನ್ನು ಪರಿಹಾರ ಮಾಡುವುದು ಆರಿಗೂ ಶಕ್ಯವಿಲ್ಲ. ಸ್ವಪರಸಮ್ಮತವಾಗಿರುವ ಪುರಾಣಾದಿ ವಚನಗಳನ್ನು ಅಂಗೀಕರಿಸಿ ಅವುಗಳ ಅರ್ಥ ವಿಷಯದಲ್ಲಿ ವಿಚಾರ ಮಾಡುವುದು ಸಿದ್ಧಾಂತಿಗಳ ಪದ್ಧತಿಯೇ ಹೊರತು ಈಗಿನವರು ಹೇಳುವಂತೆ ವಚನಗಳೇ ಕಲ್ಪಿತವೆಂದು ಕಲಹ ಮಾಡುವುದು ಪ್ರಾಜ್ಞಸಮ್ಮತವಲ್ಲ. ಅಥವಾ ವಚನಗಳು ಕಲ್ಪಿತವಾಗಿವೆ ಎಂದು ಹೇಳುವವರು ಕೂಡ ಆ ವಚನಗಳು ಬಹುಕಾಲದಿಂದಲು ಪುರಾಣಗಳಲ್ಲಿ ಪ್ರಕ್ಷಿಪ್ತವಾಗಿದ್ದುವೆಂದು ಒಪ್ಪಬೇಕಾಗಿರುವುದರಿಂದ ಆ ವಚನಗಳೇ ಈ ಮಣಿಮಂಜರೀಕಾರರ ನಿರೂಪಣೆಗೆ ಆಧಾರಗಳಾಗಿರುವ ಕಾರಣ ಇವರು ಕಲ್ಪಿಸಿ ಕಥೆಗಳನ್ನು ಬರೆದರೆಂದು ಹೇಳುವುದಕ್ಕೆ ಅವಕಾಶವು ಎಷ್ಟು ಮಾತ್ರವೂ ಇರುವುದಿಲ್ಲ. ಅಲ್ಲದೆ ಈ ವಿಷಯಗಳು ''ಉಡುಪಿಮಹಾತ್ಮ್ಯ, ಶ್ರೀಮುಷ್ಣಮಹಾತ್ಮ್ಯ'' ಮೊದಲಾದ ಪುರಾಣಭಾಗಗಳಲ್ಲಿಯೂ ಪ್ರತಿಪಾದಿಸಲ್ಪಟ್ಟಿವೆ. ವಿಸ್ತರ ಭಯದಿಂದ ಅವುಗಳನ್ನು ಇಲ್ಲಿ ಉದಾಹರಿಸಿರುವುದಿಲ್ಲ.

**6ನೆಯ ಸರ್ಗದಲ್ಲಿ** — ಐದು ಶ್ಲೋಕಗಳವರೆಗೂ, ಬೌದ್ಧರ ಪರಾಜಯಾನಂತರದಲ್ಲಿ ವರ್ಣಾಶ್ರಮಧರ್ಮ ಪ್ರಚಾರವು, ಆ ಕಾಲದಲ್ಲಿದ್ದವರಲ್ಲಿ ಭಾರವಿ–ಮಾಘ–ವರರುಚಿ - ಬಾಣ - ಮಯೂರ - ಕಾಳಿದಾಸ - ದಂಡಿ ಮೊದಲಾವರು ಕುಮಾರಿಲಭಟ್ಟರ ಮೀಮಾಂಸಾ ಶಾಸ್ತ್ರದಲ್ಲಿ ಉದಾಸೀನ ರಾದರೆಂತಲು, ಪ್ರಭಾಕರನು ಮತ್ತು ಉಂಬಕನು, ಮಂಡನಮಿಶ್ರನು ಮತ್ತು ರೇಫಣನು ಭಾಟ್ಟತಂತ್ರವನ್ನು ವ್ಯಾಸಂಗಮಾಡಿದರೆಂತಲು, ಅವರಲ್ಲಿ ಪ್ರಭಾಕರ ಮಭಟ್ಟಕುಮಾರರಲ್ಲಿ ಮಾತ್ಸರ್ಯದಿಂದ ಪ್ರಾಭಾಕರತಂತ್ರವೆಂದು ಪ್ರಸಿದ್ಧಿವಾಗಿರುವ ಮೀಮಾಂಸಾ ಶಾಸ್ತ್ರವನ್ನು ರಚಿಸಿದನೆಂತಲು ಹೇಳಿರುತ್ತಾರೆ.

ಇವು ಯಾವತ್ತು ಸುಪ್ರಸಿದ್ಧವಾದ ವಿಷಯಗಳಾಗಿಯೇ ಇರುತ್ತವೆ. ಆದರೆ ಮೇಲೆ ಹೇಳಿದ ಕಾಳಿದಾಸಾದಿ ಕವಿಗಳ ಕಾಲವು, ಭಟ್ಟಕುಮಾರಿಲರ ಕಾಲವು ಬೇರೆ ಬೇರೆಯೆಂದು ಆಕ್ಷೇಪ ಬರಬಹುದು. ಕಾಳಿದಾಸಾದಿ ನಾಮಕರಾದ ಕವಿಗಳನೇಕರಿದ್ದುದಾಗಿ ವಿಮರ್ಶಕರು ತಿಳಿದಿರುತ್ತಾರಾದ ಕಾರಣ ಭಟ್ಟ ಕುಮಾರಿಲರ ಕಾಲದಲ್ಲಿಯು ಆ ಹೆಸರಿನವರು ಬೇರೆ ಬೇರೆಯಾಗಿದ್ದಿರಬಹುದು. ಆದುದರಿಂದ ಕಾಳಿದಾಸಾದಿಗಳ ನಿರ್ದೇಶನವು ಅನುಪಪನ್ನವಲ್ಲ.

6-7ನೆಯ ಶ್ಲೋಕಗಳಿಂದ ಮಣಿಮಂತನು ಸಂಕರನೆಂಬ ಹೆಸರಿನಿಂದ ವಿಧವೆಯಾದ ಬ್ರಾಹ್ಮಣಸ್ತ್ರೀಯಲ್ಲಿ ಜಾರಪುರುಷನ ದೆಸೆಯಿಂದ ಜನಿಸಿದನೆಂತಲು, ಆ ಶಿಶುವನ್ನು ಸಂಕರನೆಂದು ಸ್ವಜನರು ಕರೆದರೆಂತಲು ನಿರೂಪಿತವಾಗಿದೆ.

ಈ ವಿಷಯವನ್ನು ಕುರಿತು ಪ್ರಾಯಿಕವಾಗಿ ಸಮಸ್ತ ಜನಗಳ ಮನಸ್ಸಿನಲ್ಲಿಯು 'ಈ ಕಥೆಯು ಯಥಾರ್ಥವಾಗಿರಬಹುದೆ; ಇಲ್ಲವೆ?' ಎಂಬ ಸಂಶಯವು, ಕೆಲವು ಜನರಿಗೆ 'ಈ ಕಥೆಯನ್ನು ಈ ಗ್ರಂಥಕಾರರು ಮತದ್ವೇಷದಿಂದ ಕಲ್ಪಿಸಿರುತ್ತಾರೆ' ಎಂಬ ನಿಶ್ಚಯವು ಉಂಟಾಗಿ ರುತ್ತದೆ. ಇದನ್ನು ಕುರಿತು ಸ್ವಲ್ಪಮಟ್ಟಿಗೆ ಈಗ ವಿಚಾರ ಮಾಡಬೇಕಾಗಿದೆ. ಈ ಕಥೆಯು ಅದ್ವೈತಮತ ಪ್ರವರ್ತಕರಾದ ಶ್ರೀಶಂಕರಾಚಾರ್ಯರ ವಿಷಯದಲ್ಲಿ ಪ್ರವರ್ತಿಸಿದುದಾಗಿರು ವುದರಿಂದ ಈ ಕಥೆಯ ವಾಸ್ತವತ್ವವನ್ನು ಪರೀಕ್ಷಿಸಬೇಕಾದರೆ ಅದ್ವೈತಿಗಳಿಂದೇ ರಚಿತಗಳಾಗಿರುವ ಶಂಕರವಿಜಯಗಳಲ್ಲಿ ಹೇಳಲ್ಪಟ್ಟಿರುವ ಶ್ರೀ ಶಂಕರಾಚಾರ್ಯರ ಉತ್ಪತ್ತಿಪ್ರಕಾರಗಳನ್ನು ಪರಿಭಾವಿಸಬೇಕಾದುದಾವಶ್ಯಕವು. ಶಂಕರವಿಜಯಗ್ರಂಥಗಳು ಆನಂದಗಿರಿ ಪ್ರಣೀತವಾದು ದೊಂದು, ಮಾಧವಾಚಾರ್ಯ ಪ್ರಣೀತವೆಂದು ಪ್ರಸಿದ್ಧವಾದುದೊಂದು, ಪುರುಷೋತ್ತಮ ಭಾರತಿಯವರಿಂದ ರಚಿತವಾದುದೊಂದು, ಚಿದ್ವಿಲಾಸಮುನಿಗಳಿಂದ ರಚಿತವಾದುದೊಂದು, ಇವು ಮುಖ್ಯವಾದವುಗಳು. ಇನ್ನು ಅನೇಕಗಳಿವೆ.

ಇವುಗಳಲ್ಲಿ ಶ್ರೀಶಂಕರಾಚಾರ್ಯರ ಅವತಾರವು ಒಂದೇ ವಿಧವಾಗಿ ಹೇಳಲ್ಪಟ್ಟಿಲ್ಲ; ಒಂದೊಂದರಲ್ಲಿಯೂ ಬೇರೆಬೇರೆಯಾಗಿ ನಿರೂಪಿಸಲ್ಪಟ್ಟಿದೆ ಹೇಗೆಂದರೆ :-

ಆನಂದಗಿರಿ ಶಂಕರವಿಜಯದಲ್ಲಿ "ಚಿದಂಬರ ಕ್ಷೇತ್ರದಲ್ಲಿ ಸರ್ವಜ್ಞನೆಂಬ ಬ್ರಾಹ್ಮಣ ಶ್ರೇಷ್ಠನು, ಕಾಮಾಕ್ಷಿಯೆಂಬ ಆತನ ಪತ್ನಿಯು ಪರಮೇಶ್ವರನ ಅನುಗ್ರಹದಿಂದ 'ವಿಶಿಷ್ಟಾ' ಎಂಬ ಹೆಸರಿನಿಂದ ಪ್ರಸಿದ್ಧಳಾದ ಪುತ್ರಿಕೆಯನ್ನು ಪಡೆದರೆಂತಲು, ಆ ಪುತ್ರಿಕೆಯನ್ನು ಎಂಟನೆಯ ವರ್ಷದಲ್ಲಿ 'ವಿಶ್ವಜಿತ್' ನಾಮಕನಾದ ಬ್ರಾಹ್ಮಣೋತ್ತಮನಿಗೆ ಕೊಟ್ಟು ವಿವಾಹ ಮಾಡಿದರೆಂತಲು, ವಿಶಿಷ್ಟೆಯು ಪತಿಯನ್ನು ಪರದೇವತೆ ಎಂದು ತಿಳಿದು ಆರಾಧಿಸುತ್ತಿದ್ದರೂ ಕೂಡ ಪತಿಯಾದ ವಿಶ್ವಜಿತ್ತೆಂಬ ಬ್ರಾಹ್ಮಣನು ತನ್ನ ಪತ್ನಿಯಾದ ವಿಶಿಷ್ಟೆಯನ್ನು ತ್ಯಜಿಸಿ ತಪಸ್ಸಿಗಾಗಿ ಅರಣ್ಯಕ್ಕೆ ಪ್ರಯಾಣ ಮಾಡಿದನೆಂತಲೂ, ತದಾದಿಯಾಗಿ ಆ ವಿಶಿಷ್ಟೆಯು ಚಿದಂಬರೇಶ್ವರನನ್ನು ಸೇವಿಸುವಾಗ ಪರಮೇಶ್ವರನು ಆಕೆಯ ಮುಖವನ್ನು ಪ್ರವೇಶಿಸಿ, ಗರ್ಭದಲ್ಲಿ ನಿಂತು ದಿನಕ್ರಮದಿಂದ ಗರ್ಭ

ಬೆಳೆಯಲು ಅವತರಿಸಿದನೆಂತಲು, ಆ ಶಿಶುವಿಗೆ ಶಂಕರಾಚಾರ್ಯನೆಂಬ ನಾಮಧೇಯ ವುಂಟಾಯಿತೆಂತಲು" ಎರಡನೆಯ ಪ್ರಕರಣದಲ್ಲಿ ನಿರೂಪಿಸಲ್ಪಟ್ಟಿದೆ.

ಈ ಕೆಳಗೆ ಉದಾಹರಿಸಲ್ಪಡುವ ಶ್ಲೋಕಗಳು ಈ ಅರ್ಥಕ್ಕೆ ಸಾಕ್ಷಿಯಾಗಿರುತ್ತವೆ.

''ततस्सर्वात्मकोदेवः चिदंबरपुराश्रितः ।
आकाशलिङ्गनाम्नातु विख्यातोऽभून्महीतले ॥
तत्र विद्वन्महेन्द्रस्य कले द्विजगणाश्रिते ।
जातः सर्वज्ञनाम्नातु कश्चिद्विजकुलेश्वरः ।
कामाक्षीति सती चाभूत्तस्य लक्षणलक्षिता ।
चिदंबरेश्वरं ध्यात्वा तावुभौ प्रापतुस्सुताम् ।
सा कुमारी सदाध्यानसक्ताऽभूत् ज्ञानतत्परा ।
विशिष्टेति च नाम्ना तु प्रसिद्धाऽभून्महीतले ॥
तामष्टमेऽब्दे विप्राय शान्तायाद्भुतकर्मणे ।
प्रददौ विश्वजिन्नाम्ने सर्वज्ञोऽस्याः पिता स्वयम् ॥
सा सदा पतिमद्वैतं ध्यात्वाकाशात्मकं शिवम् ।
तस्याराधनमत्युग्रमाचकार विवेकिनी ॥
तादृशीमपि संत्यज्य ययौ विश्वजिदद्भुतम् ।
अरण्यं तपसे कृत्वा मनो निश्चलतांगतम् ।
तदा प्रभृति सा नारी चिदंबरमहेश्वरम् ।
तोषयामास पूजाभिः ध्यानैरात्मगतैस्सदा ।
स देवः सर्वपूर्णोऽपि तस्या वदनपंकजम् ।
प्रविश्य विस्मितान् कुर्वन् जनानन्यान् समागतान् ।
महोग्रतेजसा जुष्टा विशिष्टाऽभूद्यथांबिका ।
सर्वैस्संपूजिता नित्यं पित्रादिभिरुपाश्रिता ।
अतीते मासि गर्भस्य वृद्धिरासीद्दिने दिने ।
चिदंबरेश्वरं कृत्वा यजमानं द्विजोत्तमाः ।

तृतीयादिषु मासेषु चक्रुः कर्माणि वेदतः ॥
प्राप्तेतु दशमे मासि विशिष्टागर्भगोलतः ।
प्रादुरासीन्महादेवः शंकराचार्यनामकः ॥''

(ಈ ವಾಕ್ಯಗಳು ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿಯಲ್ಲಿ 543ನೆಯ ಸಂಖ್ಯೆಯ ಶಂಕರವಿಜಯ ಪುಸ್ತಕದ 9-10ನೆಯ ಪುಟಗಳಲ್ಲಿ ನೋಡಲ್ಪಡಬಹುದು. ಈ ಪುಸ್ತಕವು ಕಲಕತ್ತಾ ಬ್ಯಾಪ್ಟಿಸ್ಟ್ ಮಿಷನ್ ಪ್ರೆಸ್ಸಿನಲ್ಲಿ 1868ನೆಯ ಕ್ರಿಸ್ತಾಬ್ದದಲ್ಲಿ ಅಚ್ಚಾದುದು.)

ಮಾಧವೀಯ ಶಂಕರವಿಜಯದ ದ್ವಿತೀಯ ಸರ್ಗದಲ್ಲಿ "ಕೇರಳ ದೇಶದಲ್ಲಿ ಕಾಲಟೀ ನಾಮಕವಾದ ಅಗ್ರಹಾರದಲ್ಲಿ ವಿದ್ಯಾರ್ಥಿರಾಜರೆಂಬ ಬ್ರಾಹ್ಮಣ ಶ್ರೇಷ್ಠರ ಪುತ್ರರಾದ ಶಿವಗುರುವೆಂಬವರ ದೆಸೆಯಿಂದ ಸತೀನಾಮಕ ಪತ್ನಿಯಲ್ಲಿ ಅವರುಭಯರ ತಪಸ್ಸಿನಿಂದ ಸಂತುಷ್ಟನಾದ ಈಶ್ವರನ ಅನುಗ್ರಹದಿಂದ ಶ್ರೀ ಶಂಕರಾಚಾರ್ಯರು ಉದಯಿಸಿದರು" ಎಂಬುದಾಗಿ ಹೇಳಲ್ಪಟ್ಟಿದೆ. ಈ ಮೇಲೆ ಹೇಳಿದ ವಿಷಯದಲ್ಲಿ ಕೆಳಗೆ ಉದಾಹರಿಸಲ್ಪಡುವ ವಾಕ್ಯಗಳು ಪ್ರಮಾಣಗಳು.

''तस्येश्वरस्य प्रणतार्तिहर्तुः प्रसादतःप्राप्तनिरीतिभावः । कश्चित्तदभ्याशगतोग्रहारः कालट्याभिख्योस्ति महान्मनोज्ञः ॥ कश्चिद्विपश्चिदिह निश्चलधीर्विरेजे विद्याधिराज इति विश्रुतनामधेयः । रुद्रो वृषाद्रिनिलयोवतरीतुकामो यत्पुत्रमात्मपितरं समरोचयत्सः ॥ पुत्रोऽभवत्तस्य पुरात्तपुण्यैः सुब्रह्मतेजाः शिवगुर्वभिख्यः । ..... लग्नेशुभे शुभयुते सुषुवे कुमारं श्रीपार्वतीव सुखिनी शुभवीक्षिते च । जाया सती शिवगुरोः निज तुंगसंस्थे सूर्ये सुते रविसुते च गुरौ च केन्द्रे''

ಈ ವಚನಗಳು ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿ ಎ.ನಂ. 157 ವುಳ್ಳ ಪುನಾಪಟ್ಟಣದಲ್ಲಿ ಆನಂದಾಶ್ರಮಮುದ್ರಣಾಲಯದಲ್ಲಿ ಮುದ್ರಿತವಾಗಿರುವ ಪುಸ್ತಕದಲ್ಲಿ ಕಂಡುಬರುತ್ತದೆ.

ಪುರುಷೋತ್ತಮ ಭಾರತೀ ವಿರಚಿತವಾದ ಶಂಕರವಿಜಯ ಸಂಗ್ರಹವೆಂಬ ಗ್ರಂಥದಲ್ಲಿ "ಶ್ರೀಮಹೇಶ್ವರನು ತಾನು ಅವತರಿಸುವುದಕ್ಕಾಗಿ ಕೇರಳದೇಳದಲ್ಲಿರುವ ಕಾಲಟೀ ಕ್ಷೇತ್ರವನ್ನು ಕುರಿತು ಪ್ರಯಾಣಮಾಡಿರುವಾಗ ಅಲ್ಲಿ ಸ್ನಾನಕ್ಕೆ ಬಂದಿದ್ದ ಶಿವಭಕ್ತಳಾದ ಒಬ್ಬ ವಿಧವೆಯು ಯತಿರೂಪಿಯಾದ ಈಶ್ವರನನ್ನು ನಮಸ್ಕರಿಸಿ 'ತಾವು ಆವ ದೇಶದಿಂದ ಬಂದಿರಿ?' ಎಂದು ಪ್ರಶ್ನೆ ಮಾಡಿದುದಕ್ಕೆ 'ನಾನು ಕೈಲಾಸಾಧಿಪತಿಯಾದ ಶಿವನು. ಇಲ್ಲಿ ಆವಿರ್ಭವಿಸುವೆನು.' ಎಂದು ಉತ್ತರವನ್ನು ಹೇಳಿ ಒಂದು ಕುಂಬಳಬೀಜವನ್ನು ಆಕೆಗೆ ಕೊಟ್ಟು ಅದನ್ನು ಸ್ತಂಭದ ಬುಡದಲ್ಲಿ ಹೂತು ನೀರುಹಾಕಿ ಬೆಳೆಸುವುದಾಗಿಯು, ಆ ಬಳ್ಳಿಯನ್ನು ಹೂವನ್ನು ಹಣ್ಣನ್ನು ಕೂಡ

ಛೇದಿಸಕೂಡದೆಂತಲು, ಫಲವು ಪಕ್ವವಾದ ಮೇಲೆ ತಾನೇ ಬೀಳುತ್ತದೆಂತಲು ಶಿವನು ಹೇಳಿ ಅಂತರ್ಧಾನವನ್ನು ಹೊಂದಲು, ಆಕೆಯು ಶಿವನ ಆಜ್ಞಾನುಸಾರ ಮಾಡಲು, ಫಲವು ಪಕ್ವವಾಗಿ ಕೆಳಕ್ಕೆ ಬೀಳಲು ಒಬ್ಬ ಮಹಾಪುರುಷನಾದ ಬಾಲಕನು ದೃಷ್ಟಿಗೋಚರನಾದ ನೆಂತಲು, ಆಗ ಆ ಬಾಲನ ರೋದನಧ್ವನಿಯನ್ನು ಕೇಳಿ ಸ್ವಜನರು ಆಕೆಯ ಮನೆಯನ್ನು ಕುರಿತು ಬಂದು ಬಾಲಕನಿಂದ ಯುಕ್ತಳಾದ ಆಕೆಯನ್ನು ಕಂಡು "ಮಕ್ಕಳಿಲ್ಲದ ನಿನಗೆ ಈ ಬಾಲಕನು ಎಲ್ಲಿಂದ ಬಂದನು" ಎಂದು ಪ್ರಶ್ನೆಮಾಡಿದರು. ಆಗ ಆಕೆಯು ಭಯಪಟ್ಟು ಒಬ್ಬ ಯತೀಶ್ವರನ ಆಜ್ಞಾನು ಸಾರವಾಗಿ ಕುಂಬಳಬೀಜವನ್ನು ಹೂತು ಬಳ್ಳಿಯನ್ನು ಬೆಳೆಸಲು ಅಲ್ಲಿ ಹುಟ್ಟಿದ ಹಣ್ಣು ಬೀಳುವಾಗ ಈ ಬಾಲಕನು ಲಬ್ಧನಾದನು. ಹೆಚ್ಚು ನಾನರಿಯೆ' ಎಂದು ಹೇಳಿದಳು. ಇದನ್ನು ಕೇಳಿ ಆಕೆಯನ್ನು ಜವರು ಭರ್ತ್ಸನಮಾಡಿ ಕೋಪದಿಂದ ತಮ್ಮ ಮನೆಗಳಿಗೆ ಹೋದರು" ಎಂದು ಹೇಳಲ್ಪಟ್ಟಿದೆ.

ಈ ಅರ್ಥವು ಕೆಳಗೆ ಬರೆಯುವ ವಚನಗಳಿಂದ ಸ್ಪಷ್ಟವಾಗುತ್ತದೆ :-

प्रथमाध्याये

"वेदाग्निहोत्रहीनांश्च दृष्ट्वा शंभुर्महीतले ।
विलोक्य कालटीक्षेत्रं सुप्रसिद्धं मनोहरम् ॥
अविर्भूयात्र दुष्टानां कर्तव्यो निग्रहो मया ॥
इत्यालोच्य तदा स्नात्वा कालटिक्षेत्रमाविशत् ॥
इदानीं शर्वयतिनं दृष्ट्वैका गतभर्तृका ।
देवपूजारता नित्यं शिवभक्तिपरायणा ॥
प्रातःस्नानार्थमायाता भिक्षुरूपधरं शिवम् ।
प्रणिपत्याथ पप्रच्छ कस्माद्देशात्त्वमागतः ॥

ईश्वरः— आगतोहं महाभागे कैलासाधिपतिःशिवः ॥
आविर्भवामि चात्रैव सेवां कर्तुमिहार्हसि ॥
इत्युक्त्वा खलु कूश्मांडबीजमेकं प्रदाय च ।
तद्रक्षणीयं यत्नेन स्तंभमूले प्रतिक्षिप ॥
जलमासिंच तन्मूलेवल्लीं पुष्पं फलं तथा ।
नछेदय फलं पक्वं स्वयमेव पतिष्यति ॥
इत्युक्त्वांतःर्दधे शंभुः कैलासमगमत् क्षणात् ॥

सा बीजं च ततस्सम्यक् स्तंभमूले निधाय च ।
जलमासिच्य यत्नेन ररक्ष सुचिरं मुदा ।
फलमेकं तदा पक्वं स्तंभाग्रान्निपपात हा ॥
फले च पतिते तत्र महापुरुषमीश्वरम् ।
दृष्ट्वा बालकमादाय संररक्षप्रयत्नतः ॥
तदानीं बालरुदितं श्रुत्वा तत्राखिला जनाः ।
आगत्य तद्गृहं शीघ्रं सबालां तामथाब्रुवन् ॥
अपुत्रायास्तव कथं बाल एषस्समागतः ।
इत्थंजनवचः श्रुत्वा साब्रवीद्भयविह्वला ॥
इहागत्य यतिः कश्चिद्बीजमेकं प्रदत्तवान् ।
रक्षेत्युक्त्वा गतो भिक्षुः मया तत्परिरक्षितम् ॥
तत्र जातात्फलात्सद्यः पतितो ह्येष बालकः ।
लब्धश्चान्यन्न जानेहमिति श्रुत्वा च ते जनाः ॥
नारीं निभर्त्स्य कोपेन सर्वेपि स्वगृहं ययुः ॥
ततस्सा बालकं सम्यगतिहर्षादपालयत् ॥''

ಈ ವಚನಗಳು ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿಯಲ್ಲಿ 51ನೆಯ ನಂಬರಿನ ಲಿಖಿತಪುಸ್ತಕದಲ್ಲಿ ದೊರೆಯುತ್ತವೆ.

ಚಿದ್ವಿಲಾಸಮುನಿ ವಿರಚಿತವಾದ ಶಂಕರವಿಜಯದಲ್ಲಿ ಮಾಧವೀಯ ಶಂಕರವಿಜಯದಲ್ಲಿ ಹೇಳಿದಂತೆಯೇ ಶಂಕರಾಚಾರ್ಯರ ಪ್ರಾದುರ್ಭಾವಕಥೆಯು ನಿರೂಪಿತವಾಗಿದೆ. ಆದರೆ ಅಲ್ಲಲ್ಲಿ ಕೆಲವು ಹೆಸರುಗಳು ಮೊದಲಾದವು ಬೇರೆ ಬೇರೆಯಾಗಿ ಹೇಳಲ್ಪಟ್ಟಿರುತ್ತವೆ.

ಮತ್ತು ಮೇಲೆ ಹೇಳಿದ ಶಂಕರವಿಜಯ ಗ್ರಂಥಗಳನ್ನು ಅನುಸರಿಸಿ ಚರಿತ್ರಸಂಗ್ರಹವು ಕನ್ನಡ ಭಾಷೆಯಿಂದ ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿ ಕೆ.ಎ. 247 ನಂಬರಿನ ಲಿಖಿತ ಪುಸ್ತಕದಲ್ಲಿ ಸಂಗ್ರಹದಿಂದ ಬರೆಯಲ್ಪಟ್ಟಿದೆ. ಅದರಲ್ಲಿ ಪುರುಷೋತ್ತಮಭಾರತೀ ಕೃತ ಶಂಕರವಿಜಯ ಸಂಗ್ರಹದಲ್ಲಿ ಉಕ್ತವೆಂದು ನಾವು ಮೇಲೆ ತೋರಿಸಿರುವ ಕಥೆಯು ಆ ಪುಸ್ತಕದಲ್ಲಿ ಭವಿಷ್ಯೋತ್ತರ ಪುರಾಣದ ಕಥೆಯ ಸಂಗ್ರಹವೆಂದು ಬರೆಯಲ್ಪಟ್ಟಿದೆ.

ಮೇಲೆ ತೋರಿಸಿದ ಆಧಾರಗಳಿಂದ ಶ್ರೀಶಂಕರಾಚಾರ್ಯರ ಪ್ರಾದುರ್ಭಾವ ಪ್ರಕಾರವನ್ನು ಅವರ ಜನ್ಮಸ್ಥಳವನ್ನು, ಅವರ ತಾಯ್ತಂದೆಗಳ ಹೆಸರನ್ನು ನಿರ್ಣಯಿಸಲು ಸಾಧ್ಯವಿಲ್ಲ. ಆನಂದ ಗಿರಿಯಲ್ಲಿ ಚಿದಂಬರವು ಆಚಾರ್ಯರ ಜನ್ಮಸ್ಥಳವೆಂದು, ಇತರ ಗ್ರಂಥಗಳಲ್ಲಿ ಕಾಲಟೀಗ್ರಾಮವೆಂದು ಹೇಳಲ್ಪಟ್ಟಿರುವುದರಿಂದ ಇದೇ ಯುಕ್ತವೆಂದು ಹೇಳಲು ವಿಶೇಷ ಸಾಧಕವಿಲ್ಲದುದರಿಂದ ಸಂದೇಹ ಉಂಟಾಗುತ್ತದೆ. ಹೀಗೆಯೆ ತಾಯಿ ವಿಶಿಷ್ಠೆಯೆಂತಲೂ ತಂದೆ ವಿಶ್ವಜಿತ್ ಎಂತಲೂ ಆನಂದಗಿರಿ ಯಲ್ಲಿ, ತಾಯಿ ಸತೀಎಂತಲೂ ತಂದೆ ಶಿವಗುರುವೆಂತಲೂ ಮಾಧವೀಯದಲ್ಲಿಯು ಹೇಳಲ್ಪಟ್ಟಿ ರುವ ವಿಷಯಗಳಲ್ಲಿ ಒಂದು ಪಕ್ಷವನ್ನು ನಿರ್ಣಯಿಸಲು ಸಾಧಕವಿಲ್ಲದಿರುವುದರಿಂದ ಸಂದೇಹವೇ ಬರುತ್ತದೆ. ಇದೇ ಪ್ರಕಾರವಾಗಿ ಪತಿ ಸಂಬಂಧವಿಲ್ಲದೆ ಈಶ್ವರನು ಮುಖದಲ್ಲಿ ಪ್ರವೇಶಿಸುವುದರಿಂದುಂಟಾದ ಗರ್ಭದಿಂದ ಆಚಾರ್ಯರ ಜನನವೆಂದು ಆನಂದಗಿರಿಯ ಕಥೆಗೂ, ಲೋಕನ್ಯಾಯವನ್ನನುಸರಿಸಿ ತಪಸ್ಸುಮಾಡಿ ಶಿವಪ್ರಸಾದವನ್ನು ಪಡೆದ ದಂಪತಿಗಳ ಸಂಬಂಧದಿಂದುಂಟಾದ ಗರ್ಭದಿಂದ ಆಚಾರ್ಯರ ಜನನವೆಂದು ಮಾಧವೀ ಯೋಕ್ತ ಕಥೆಗು, ಕೂಷ್ಮಂಡ ಫಲದಿಂದ ಶಿಶುಪ್ರಾದುರ್ಭಾವವೆಂದು ಪುರುಷೋತ್ತಮಭಾರತೀ ಕೃತ ಗ್ರಂಥದಲ್ಲಿ ಹೇಳಲ್ಪಟ್ಟ ಕಥೆಗು ಅತ್ಯಂತ ವಿರೋಧವಿರುವುದರಿಂದ, ಇವುಗಳಲ್ಲಿ ಒಂದು ಪಕ್ಷವೇ ಸರಿಯೆಂದು ನಿರ್ಣಯಿಸಲು ಸಾಧಕವಿಲ್ಲದಿರುವುದರಿಂದ ಸಂದೇಹವೇ ಬರುತ್ತದೆ. ಈ ಸಂದೇಹಗಳನ್ನು ಪರಿಹರಿಸಲು ತಕ್ಕ ಉಪಾಯವೇನೂ ಇರುವುದಿಲ್ಲ. ಹೀಗಿದ್ದರೂ ಕೂಡ ಅದ್ವೈತಿಗಳಲ್ಲಿ ಕೆಲವರು ಆನಂದಗಿರಿಯವನ್ನೇ, ಇತರರು ಮಾಧವೀಯವನ್ನೆ, ಇನ್ನು ಕೆಲವರು ಪುರುಷೋತ್ತಮಭಾರತೀ ಕೃತವನ್ನೆ ಪ್ರಮಾಣವೆಂದೊಪ್ಪಿ ಇತರ ಗ್ರಂಥಗಳು ಪ್ರಮಾಣವಲ್ಲವೆಂದು ಹೇಳುವುದಕ್ಕೆ ಅವರವರಿಗೆ ಆಯಾ ಗ್ರಂಥಕರ್ತರಲ್ಲಿರುವ ಅಭಿಮಾನವಿಶೇಷವು ಕಾರಣವಾಗಿರಬಹುದಾದುದರಿಂದ ಹೇಗೋ ಒಂದು ಬಗೆಯಿಂದ ವಿರೋಧ ಪರಿಹಾರವನ್ನು ಮಾಡಿಕೊಳ್ಳಬಹುದು.

ಹಾಗಲ್ಲದೆ, ಶಂಕರಾಚಾರ್ಯರ ಮಹಾತ್ಮ್ಯವನ್ನು ಮತ್ತು ಅವರ ಮತದ ಸಾಧುತ್ವವನ್ನು ಅಂಗೀಕರಿಸದೆ ಇರುವ ಮತಾಂತರೀಯ ಪರೀಕ್ಷಕರು ಮೇಲೆ ಹೇಳಿದ ಗ್ರಂಥಗಳಿಗೆ ಶಂಕರಾ ಚಾರ್ಯರ ಚರಿತ್ರ ವಿಷಯದಲ್ಲಿರುವ ಪರಸ್ಪರ ವಿರೋಧವನ್ನು ಕಂಡು ಪಕ್ಷಪಾತವಿಲ್ಲದೆ ಪರ್ಯಾಲೋಚಿಸಿದರೆ ಅಂತಹವರಿಗೆ ಆ ಗ್ರಂಥಗಳಲ್ಲಿ ಹೇಳಿರುವ ಶ್ಲಾಘನೆಯಲ್ಲಿ ಕೆಲವಂಶವು ಪ್ರಾಮಾಣಿಕವಾಗಿಯು ಕೆಲವು ಅಪ್ರಾಮಾಣಿಕವಾಗಿಯೂ ಇರಬಹುದೆಂತಲೂ, ಅವುಗಳಿಂದ ತೋರಿಬರುವ ಕೊರತೆಗಳು ಮಾತ್ರ ಸಮಸ್ತವೂ ವಾಸ್ತವವೆಂತಲೂ ತೋರಬಹುದು. ಏಕೆಂದರೆ – ಒಂದು ವ್ಯಕ್ತಿಯನ್ನು ಶ್ಲಾಘಿಸಬೇಕೆಂದು ಸಂಕಲ್ಪವನ್ನು ಮಾಡಿ ಗ್ರಂಥವನ್ನು ರಚಿಸಲಾರಂಭಿಸಿದ ಪುರುಷನು ತನ್ನ ಸಂಕಲ್ಪಕ್ಕನುಕೂಲವಾಗಿ, ಅತಿಶಯೋಕ್ತಿ ಪ್ರಕ್ರಿಯೆಯನ್ನು ಅಥವಾ ಅತ್ಯುಕ್ತಿ ಪ್ರಕ್ರಿಯೆಯನ್ನು ಅವಲಂಬಿಸಿ ವಾಸ್ತವವಾಗಿ ವರ್ಣ್ಯವಸ್ತುವಿನಲ್ಲಿರುವ ಸಾಧಾರಣ ಗುಣಗಳನ್ನು ಲೋಕಪಿಲಕ್ಷಣವಾಗಿಯು, ಇಲ್ಲದೇ ಇರುವ ಗುಣಗಳನ್ನೇ ಆರೋಪಿಸಿ ಅವೆಲ್ಲ ಸತ್ಯವಾಗಿಯೂ ತೋರುವಂತೆ ವರ್ಣನೆ ಮಾಡುತ್ತಾನೆ, ಹೊರತು ವರ್ಣ್ಯ ವಸ್ತುವಿನಲ್ಲಿ ಕೊರತೆಯನ್ನು

ಸ್ವಲ್ಪವಾದರೂ ಹೇಳುವುದಿಲ್ಲವೆಂಬುದು ಸರ್ವಸಂಮ್ಮತವು. ಆದುದರಿಂದಲೇ ಸುಪ್ರಸಿದ್ಧ ಪ್ರತಿಭಾಶಾಲಿಗಳಾದ ನ್ಯಾಯಸ್ಥಾನಾಧಿಪತಿಗಳು ವಾದಿಪ್ರತಿವಾದಿ ಪಕ್ಷದವರಿಂದ ಅವರವರ ಪಕ್ಷಕ್ಕೆ ಏನಾದರೂ ವಿರುದ್ಧಾಂಶವು ನುಡಿಯಲ್ಪಟ್ಟರೆ ಆದರಲ್ಲಿ ಪ್ರಾಯಿಕವಾಗಿ ವಿಶ್ವಾಸವಿಡುವುದು ಕಂಡುಬರುತ್ತಲಿದೆ.

ಮೇಲೆ ತೋರಿಸಿದ ನ್ಯಾಯಗಳನ್ನು ತಿಳಿದು ಶಂಕರವಿಜಯಗ್ರಂಥಗಳನ್ನು ಪರಾಮರ್ಶಿಸಿದ ಮತಾಂತರೀಯ ಜನರು ಶಂಕರಾಚಾರ್ಯರ ಪ್ರಾದುರ್ಭಾವವು ಆನಂದಗಿರಿ ಹೇಳಿದಂತೆಯೇ ಪತಿಸಂಬಂಧವಿಲ್ಲದೆ ಆಯಿತೆಂಬಂಶವು, ಪುರುಷೋತ್ತಮಭಾರತಿ ಹೇಳಿದ ಪ್ರಕಾರ ಆಚಾರ್ಯರನ್ನು ಪೋಷಿಸಿದ ವಿಧವೆಯಲ್ಲಿ ಆಕೆಯ ಬಂಧುಗಳಿಗೆ ದೋಷಬುದ್ಧಿಯು ಹುಟ್ಟಿತೆಂಬಂಶವು ಯಥಾರ್ಥವೆಂದು ನಂಬುವುದಕ್ಕೆ ಕಾರಣಗಳು ಹೆಚ್ಚಾಗಿರುತ್ತವೆ. ಶಂಕರಾಚಾರ್ಯರ ವಿಜಯವನ್ನು ರಚಿಸಿದವರು ಅವರ ಉತ್ಕರ್ಷಕ್ಕೆ ಭಾಧಕವಾದ ವಿಷಯಗಳು ಸುಳ್ಳಾಗಿದ್ದರೆ ಹೇಳುತ್ತಿರಲಿಲ್ಲ. ಇಂತಹ ವಿಷಯಗಳನ್ನು ಹೇಳುವುದೇ ಯುಕ್ತವಲ್ಲವೆಂದೆನ್ನುವುದು ಸರಿಯಲ್ಲ. ಈ ಕಥೆಗಳಿಗೆ ಕೂಡ ಶ್ರೀಶಂಕರಾಚಾರ್ಯರು ಅಲೌಕಿಕವಾಗಿ ಪುರುಷ ಸಂಬಂಧವಿಲ್ಲದೆ ಭಗವದನುಗ್ರಹ ಮಾತ್ರದಿಂದಲೇ ಸ್ತ್ರೀಮೂಲಕವಾಗಿಯೂ ಕೂಷ್ಮಾಂಡ ಫಲಮೂಲಕವಾಗಿಯೂ ಪ್ರಾಧುರ್ಭವಿಸಿದರೆಂದು ಮಹಾಮಾಹಾತ್ಮ್ಯದಲ್ಲಿಯೇ ಪರ್ಯವಸಾನ ಮಾಡಿಕೊಳ್ಳಬಹುದಾದುದರಿಂದ ಮಹಾತ್ಮರ ವಿಷಯದಲ್ಲಿ ಇಂತಹ ಸತ್ಯವಾದ ವಿಷಯಗಳನ್ನು ಮರೆಮಾಚುವುದು ಯುಕ್ತವಲ್ಲವೆಂದು ಆ ಗ್ರಂಥಕಾರರಿಗೆ ಅಭಿಪ್ರಾಯವಿರಬಹುದು. ಗ್ರಂಥಕಾರರ ಅಭಿಪ್ರಾಯ ಹಾಗಿದ್ದರೂ ಕೂಡ ಇತರ ಮತೀಯರು ಅವರ ಜನನಕ್ರಮದಲ್ಲಿ ಕೋರತೆಯನ್ನು ಎಣಿಸುವುದಕ್ಕೆ ನಿವಾರಣೆ ಮಾಡುವುದು ಆರಿಗೂ ಶಕ್ಯವಿಲ್ಲ. ಭಕ್ತರಲ್ಲದೆ ವಿಚಾರ ಮಾಡುವರಿಗೆ ಲೋಕ ನ್ಯಾಯಾನುಸಾರದಿಂದ ಯುಕ್ತಾಯುಕ್ತ ವಿವೇಚನೆಯಲ್ಲಿ ಪ್ರವೃತ್ತಿ ಹುಟ್ಟುವುದು ಸಹಜವಲ್ಲವೆ.

ಅಲ್ಲದೆ ಆಚಾರ್ಯರ ತಾಯಿಯ ನಡತೆಯ ವಿಷಯದಲ್ಲಿ ಆ ಕಾಲದ ಜನಗಳಿಗೆ ಅಯುಕ್ತತ್ವಬುದ್ಧಿ ಇತ್ತೆಂಬುದಕ್ಕೆ, ಆಚಾರ್ಯರ ತಾಯಿಯು ಪರಲೋಕಗತಳಾದಾಗ ಆಕೆಯ ಸಂಸ್ಕಾರಕ್ಕಾಗಿ ಬ್ರಾಹ್ಮಣರೊಬ್ಬರೂ ಬರದೆ ತಿರಸ್ಕರಿಸಿದರೆಂಬುದು, ಅವರಲ್ಲಿ ಕೋಪದಿಂದ ಆಚಾರ್ಯರು ತಾಯಿಯ ಶವವನ್ನು ತಮ್ಮ ಮನೆಯ ಹಿತ್ತಲಲ್ಲೆ ಸುಟ್ಟು ಈ ಆಚಾರವು ಇನ್ನು ಮೇಲೆ ಈ ದೇಶದಲ್ಲಿ ಬಿಡದೇ ನಡೆಯಲಿ ಎಂದು ವಚಿಸಿದರೆಂಬುದು, ತದನುಗುಣವಾದ ಆಚಾರವು ಈಗಲೂ ಆ ದೇಶದಲ್ಲಿ ನಡೆಯುತ್ತಿರುವುದು ಕೂಡ ಸಾಧಕವಾಗಿರುತ್ತದೆ. ಈ ವಿಷಯವು ಪುರುಷೋತ್ತಮ ಭಾರತೀ ಕೃತ ಶಂಕರವಿಜಯ ಸಂಗ್ರಹದಲ್ಲಿ ತೃತೀಯಾಧ್ಯಾಯದಲ್ಲಿ

''ततो मात्रा स्मृतस्तस्मात्स्वजन्मागारमाप सः ।
स त्वाह मातरं स्वीयामासन्नमरणां स्मृतः ।
किमर्थं ब्रूहि मे मातराज्ञापय करोमि किम् ।

आपत्काले स्मृतस्त्वं हि यथेच्छसि तथा कुरु ।
इत्युक्त्वा पुत्रमालिंग्य देहं त्यक्त्वा दिवंगता ।
ततो मातुः क्रियार्थं तु तत्रत्या ब्राह्मणोत्तमाः ॥
अहूता अपि नायाताश्शापं दत्वा ततो गुरुः ।
तदा देवान् समाहूय दाहयामासतैस्स च ।
मातुर्देहं ततस्सर्वां क्रियां निर्वर्त्य ते गताः ।
आचार्यमतुलं दृष्ट्वा तत्रत्या ब्राह्मणोत्तमाः ।
तदाप्रभृति शापेन निष्कुटे प्रदहंति च ।''

ಎಂಬ ವಚನಗಳಿಂದ ಸಿದ್ಧವಾಗುತ್ತದೆ.

ಈ ಪ್ರಕಾರ ಸಪ್ರಮಾಣಕವಾಗಿ ಕಂಡುಬರುವ ವಿಷಯಗಳನ್ನು ಮರೆಮಾಚದೆ ಗ್ರಂಥದಿಂದ ಸ್ಪಷ್ಟಪಡಿಸಿರುವುದು ಮಣಿಮಂಜರೀಕಾರರಲ್ಲಿ ಮತದ್ವೇಷಾದಿಮೂಲಕವಲ್ಲದೆ ವಸ್ತುಸ್ಥಿತಿಯನ್ನನುಸರಿಸಿದುದೇ ಯೆಂದು ಹೇಳುವುದುಚಿತವು. ಇದೇ ರೀತಿಯಾಗಿ ಆಕ್ಸ್‌ಫರ್ಡ್‌ನಲ್ಲಿ ಬೋರ್ಡ್ ಸಾನ್‌ಸ್ಕ್ರಿಟ್ ಪ್ರೋಫೆಸರ್ ಆದ ಎಚ್.ಎಚ್. ವಿಲ್ಸನ್, L.L.D. F.R.S. ಎಂಬ ಪಂಡಿತನು 'Sketch of the Religions sets of the Hindus' ಎಂಬ ತನ್ನ ಗ್ರಂಥದಲ್ಲಿ ಅನೇಕಗಳಾದ ಭಾರತ ಖಂಡದ ಮತಗಳ ವಿಷಯವನ್ನು, ತತ್ಪ್ರವರ್ತಕರಾದ ಆಚಾರ್ಯ ವಿಷಯಗಳನ್ನು ನಿರೂಪಿಸಿರುವಂತೆಯೆ, ಆ ಪುಸ್ತಕದ 125ನೆಯ ಪುಟದ ಕೊನೆಯ ಭಾಗದಿಂದ 130ನೆಯ ಪುಟದ ವರೆಗೂ ಶ್ರೀಶಂಕರಾಚಾರ್ಯರ ಮತ್ತು ತದನುಯಾಯಿಗಳ ವಿಷಯವನ್ನು ನಿರೂಪಿಸಿರುವನು. ಆ ಪ್ರಕರಣದಲ್ಲಿ ಶಂಕರಾಚಾರ್ಯರ ಚರಿತ್ರವು ಸರಿಯಾಗಿ ತಿಳಿಯಲು ಶಕ್ಯವಲ್ಲವೆಂತಲೂ, ಆದರೂ ನಂಬಬಹುದಾದ ಆಧಾರಗಳನ್ನನುಸರಿಸಿ ಕೆಲವು ವಿಷಯಗಳನ್ನು ಹೇಳಬಹುದಾಗಿದೆಯೆಂತಲೂ ಹೇಳಿ, ಶಂಕರಾಚಾರ್ಯರಿಂದೇ ರಚಿತವೆಂದು ಹೇಳಲ್ಪಡುತ್ತಿರುವ ''ಕೇರಳೋತ್ಪತ್ತಿ' ಎಂಬ ಗ್ರಂಥದಲ್ಲಿ ಶಂಕರಾಚಾರ್ಯರ ಜನನವು ವ್ಯಭಿಚಾರ ಮೂಲಕವೆಂದು ಹೇಳಲ್ಪಟ್ಟಿರುವುದಾಗಿಯು, ಅದಕ್ಕಾಗಿ ಅವರ ತಾಯಿ ಮಹಾದೇವಿಯು ಬಹಿಷ್ಕೃತಳಾದಳೆಂತಲೂ, ಆಕೆಯ ಉತ್ತರಕ್ರಿಯೆಗಳ ವಿಷಯದಲ್ಲಿ ಸ್ವಜನರೆಲ್ಲರೂ ಸಹಾಯ ಮಾಡದೆ ವಿರೋಧಿಸಿದರೆಂತಲೂ, ಅಂತಹ ಸ್ವಜನರಿಗೆ ಆಚಾರ್ಯರ ಶಾಪ ಬಂತೆಂಬುದು ಮೊದಲಾದುದು ನಿರೂಪಿತವಾಗಿದೆ. ಈ ಪುಸ್ತಕವು ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿಯಲ್ಲಿ ಇಂಗ್ಲೀಷ್ 212/1048ನೆಯ ನಂಬರುಳ್ಳದ್ದಾಗಿ ಇಡಲ್ಪಟ್ಟಿದೆ.

ಅಲ್ಲದೆ ಮದ್ರಾಸ್ ದೇಶದಲ್ಲಿ ಸುಪ್ರಸಿದ್ಧರಾದ ಮ॥ ರಾ॥ ವೀರೇಶಲಿಂಗಂಪಂತುಲು ಯೆಂಬವರು ಆಂಧ್ರಾಕ್ಷರದಲ್ಲಿ ಮುದ್ರಿಸಿ ಪ್ರಚುರಪಡಿಸಿರುವ ಶ್ರೀ ಶಂಕರಾಚಾರ್ಯರ ವಿಷಯದ

ಉಪನ್ಯಾಸ ಪುಸ್ತಕದಲ್ಲಿಯು ಆಚಾರ್ಯರ ಜನನವು "ಕೇರಳೋತ್ಪತ್ತಿ" ಎಂಬ ಗ್ರಂಥದಲ್ಲಿ ಮೇಲೆ ಹೇಳಿದಂತೆಯೇ ಉಕ್ತವಾಗಿದೆಯೆಂದು ಸೂಚನೆಯಿದೆ. ಈ ಕಾರಣಗಳಿಂದ ಶಂಕರಾಚಾರ್ಯರ ಅವತಾರ ವಿಷಯದಲ್ಲಿ ಮಣಿಮಂಜರೀಕಾರರ ನಿರೂಪಣವು ವಸ್ತುಸ್ಥಿತಿಯನ್ನು ಅನುಸರಿಸಿದುದೆ ಎಂಬ ವಿಷಯವು ಸ್ಥಿರಪಡುತ್ತದೆ.

ಇನ್ನು ಈ ಆಚಾರ್ಯ ನಾಮವನ್ನು 'ಸಂಕರ' ಎಂದುಪಯೋಗಿಸಿರುವ ವಿಷಯದಲ್ಲಿ ಸ್ವಲ್ಪಮಟ್ಟಿಗೆ ಹೇಳಬೇಕಾಗಿದೆ. ಆಚಾರ್ಯರು ಈಶ್ವರಾಂಶ ಸಂಭೂತರೆಂಬ ವಿಷಯದಲ್ಲಿ ಸಾಧಕಗಳು ಮತ್ತು ಜನರಿಗೆ ವಿಶ್ವಾಸವು ಇರುವುದರಿಂದ ಅವರಲ್ಲಿ ಶಂಕರನಾಮವು ಸುಪ್ರಸಿದ್ಧವಾಗಿದೆಯಷ್ಟೆ. ಶವರ್ಣದ ಉಚ್ಚಾರಣೆಯು ಸರಿಯಾಗಿ ಸರ್ವರ ಮುಖದಿಂದಲೂ ಆಗುವುದಿಲ್ಲವೆಂಬುದು ಶಿಲಾಶಾಸನಾದಿಗಳಲ್ಲಿ 'ಸಂಕರಭಟ್ಟ, ಸಂಕರಗೌಡ' ಎಂಬುದೇ ಮೊದಲಾದ ಬರವಣಿಗೆ ಕಂಡುಬರುತ್ತಿರುವುದರಿಂದ ಸ್ಪಷ್ಟವು. ಆ ಕಾಲದಲ್ಲಿ ಕೆಲವರು ಆಚಾರ್ಯರನ್ನು 'ಸಂಕರಾಚಾರ್ಯ' ಎಂದು ಕರೆಯುತ್ತಿದ್ದಿರಬಹುದು. ಅಲ್ಲದೆ ಅಪೂರ್ವವಾಗಿ ಜನಿಸಿದ ಶಿಶುಗಳಿಗೆ ತಾಯ್ತಂದೆಗಳು 'ಕುಪ್ಪ, ತಿಪ್ಪ, ಕಲ್ಲ, ಗುಂಡ' ಇವೆ ಮೊದಲಾದ ಹೆಸರುಗಳಿಂದ ಕರೆಯುವುದುಂಟು. ಆ ಪ್ರಕಾರ ತಾಯಿ ಕರೆಯುತ್ತಿದ್ದ 'ಕುಪ್ಪ' ಅಥವಾ 'ತಿಪ್ಪ' ಎಂಬ ಪದವನ್ನು ಈ ಗ್ರಂಥದಲ್ಲಿ ಸಂಸ್ಕೃತಕ್ಕೆ ಪರಿವರ್ತನಮಾಡಿ 'ಸಂಕರ' ಎಂದು ವ್ಯವಹರಿಸಲಾರಂಭಿಸಿ ಕವಿಮಾರ್ಗವನ್ನನುಸರಿಸಿ ಅರ್ಥಾಂತರ ವರ್ಣನವನ್ನು ಮಾಡಿರುತ್ತಾರೆಂದು ಹೇಳುವುದಕ್ಕೆ ಅವಕಾಶವಿರುತ್ತದೆ. ಆದುದರಿಂದ ಹೆಸರನ್ನು ಕಲ್ಪಿಸಿದ ದೋಷವನ್ನು ಆರೋಪಿಸುವುದು ನ್ಯಾಯವಲ್ಲ.

8ನೆಯ ಶ್ಲೋಕದಿಂದ 12ನೆಯ ಶ್ಲೋಕದವರೆಗೂ ಶ್ರೀಶಂಕರಾಚಾರ್ಯರು ಬಾಲ್ಯದಲ್ಲಿ ತಾಯಿಯ ಪ್ರೇರಣೆಯಂತೆ ಬದನೇಕಾಯಿಗಳನ್ನು ತರುವುದಕ್ಕಾಗಿ ಹೋಗಿ ಬದನೇಕಾಯಿಗಳನ್ನು ಒಂದು ಒಂದು ಎಂತಲೇ ಎಣಿಸಿ '2ನೆಯ ಕಾಯಿಯೇ ತನಗೆ ಕಾಣಲಿಲ್ಲ. ಐದಾರು ಕಾಯಿಗಳನ್ನು ಹೇಗೆ ತರಬಹುದು' ಎಂದು ತಾಯಿಗೆ ಹೇಳಿದರೆಂತಲೂ ಅದನ್ನು ಕೇಳಿ ಪಥಿಕರು ಅಪಹಾಸ ಮಾಡಿದರೆಂತಲೂ ಹೇಳಲ್ಪಟ್ಟಿದೆ. ಇದು ಸಹಜವಾದುದರಿಂದ ವಿಶೇಷ ಚರ್ಚೆಗೆ ಅರ್ಹವಾದುದೇ ಅಲ್ಲ. ಶ್ರೀಶಂಕರಾಚಾರ್ಯರು ಅದ್ವೈತಮತ ಸ್ಥಾಪನೆಯ ಪ್ರಕಾರಗಳನ್ನು ಪರೀಕ್ಷಿಸುವುದಕ್ಕಾಗಿಯೇ ಹೀಗೆ ಮಾಡಿರಬಹುದು.

13-14 ಶ್ಲೋಕಗಳಲ್ಲಿ ಅವರ ಉಪನಯನ ವೇದಾಧ್ಯಯನಗಳ ವಿಚಾರಗಳು ಹೇಳಲ್ಪಟ್ಟಿವೆ. ಅವರ ತಂದೆಗಳು ಗತಿಸಿದ ನಂತರವೇ ಉಪನಯನವಾಯಿತೆಂದು ಶಂಕರ ವಿಜಯಗಳಲ್ಲಿಯೇ ಹೇಳಿರುವುದರಿಂದ ಏನೂ ವಿರೋಧವಿರುವುದಿಲ್ಲ. ವೇದಾಧ್ಯಯನ ವಿಷಯವಂತು ಶ್ಲಾಘನೀಯವಾಗಿಯೇ ಹೇಳಲ್ಪಟ್ಟಿದೆ.

15-16 ಶ್ಲೋಕಗಳಲ್ಲಿ ನದಿಯನ್ನು ದಾಟುವಾಗ ಯಜ್ಞೋಪವೀತವನ್ನು ಕಳೆದುಕೊಂಡು ಅಕರ್ಮಿಯಾದ ತಮಗೆ ಯಜ್ಞೋಪವೀತದ ಅವಶ್ಯಕತೆ ಇಲ್ಲವೆಂದು ನುಡಿದುದಾಗಿ ಹೇಳುರುವುದು ಸಹಜವೆ.

17ನೆಯದರಿಂದ 21ರ ವರೆಗೂ ಪರತೀರ್ಥಾದಿಗಳಿಂದ ಸನ್ಯಾಸ ಗ್ರಹಣ ವಿಷಯದಲ್ಲಿ ಯತ್ನವು ಫಲಿಸಲಿಲ್ಲವೆಂದು ಹೇಳಲ್ಪಟ್ಟಿದೆ. ಪರತೀರ್ಥಾದಿಗಳು ಪರಮವೈಷ್ಣವ ಸಂನ್ಯಾಸಿಗಳಾದುದರಿಂದ ಶ್ರೀಶಂಕರಾಚಾರ್ಯರ ತೀರ್ಯಕ್ಪುಂಡ್ರ ಧಾರಣಾದಿ ಲಕ್ಷಣಗಳನ್ನು ನೋಡಿ ಇವರಿಗೆ ಸಂನ್ಯಾಸವನ್ನು ಕೊಡದೇಹೋದುದು ಅಸಂಭಾವಿತವಲ್ಲ.

22ನೆಯದರಿಂದ 39ರವರೆಗೂ ಶ್ರೀಶಂಕರಾಚಾರ್ಯರ ಅವತಾರಕ್ಕೆ ಫಲವಾಗಿರುವ ಮಾಯಾವಾದ ಪ್ರವರ್ತನ ವಿಷಯದಲ್ಲಿ ಶ್ರೀಶಂಕರಾಚಾರ್ಯರನ್ನು ಪ್ರೋತ್ಸಾಹಪಡಿಸಿ ಗೋವಿಂದ ಸ್ವಾಮಿಗಳಲ್ಲಿ ಆಶ್ರಮಸ್ವೀಕಾರ ಮಾಡಬೇಕೆಂದು ರಾತ್ರಿ ಕಾಲದಲ್ಲಿ ದೈತ್ಯರು ಬೋಧಿಸಿದರೆಂಬ ವಿಷಯವು, ಗೋವಿಂದಸ್ವಾಮಿಗಳಿಗೆ ಸಂನ್ಯಾಸಲಾಭವಾದ ಪ್ರಕಾರವೂ ಹೇಳಲ್ಪಟ್ಟಿದೆ. ಐದನೆಯ ಸರ್ಗದಲ್ಲಿ ನಿರೂಪಿಸಿರುವ ಪ್ರಕಾರ ದೈತ್ಯರು ಇವರಿಗೆ ಸಹಾಯರಾಗಿರುವರೆಂದು ಸಿದ್ಧಿಸುತ್ತದಾದ ಕಾರಣ ಇದನ್ನು ಬೇರೆ ವಿಚಾರಮಾಡತಕ್ಕುದನಾವಶ್ಯಕ. ಐದನೆಯ ಸರ್ಗದ ಕೊನೆಯಲ್ಲಿ ನಿರೂಪಿಸಿರುವ ಪ್ರಕಾರ ದೇಶಾಂತರಗತರಾದ ಬೌದ್ಧರಲ್ಲಿ ಕೆಲವರು ಭರತ ಖಂಡಕ್ಕೆ ಮತ್ತು ಬಂದು ವಾಸಮಾಡುತ್ತಾ ಬಂದುದು ಚರಿತ್ರಶೋಧಕರು ಒಪ್ಪಿದ ವಿಷಯವಾಗಿದೆ. ಅಂತಹವರಲ್ಲಿ ಆರಾದರೊಬ್ಬರು ಆಸ್ತಿಕಸ್ಮಾರ್ತ ವೇಷದಿಂದಲೂ ಇದ್ದು ಗೌಡಪಾದರಿಗೆ ಸಂನ್ಯಾಸವನ್ನು ಕೊಟ್ಟಿರಬಹುದು. ಅದನ್ನು ಆಗಿದ್ದ ಇತಿಹಾಸರೂಪವಾದ ಪ್ರವಾದವನ್ನನುಸರಿಸಿ ಗ್ರಂಥಕಾರರು ಬಕ್ಕಸ್ವಾಮಿಯೆಂದು ಬರೆದಿರಬಹುದು. ಆದುದರಿಂದ ಇದು ಅಸಂಭಾವಿತವಲ್ಲ.

42ನೆಯದರಿಂದ 44ರವರೆಗೂ ಪ್ರಭಾಕರರು, ಭಟ್ಟಕುಮಾರರು, ಭಾಸ್ಕರಾಚಾರ್ಯರು, ಶಂಕರಾಚಾರ್ಯರು ಸಹ ಬ್ರಹ್ಮದತ್ತರೆಂಬ ಸಂನ್ಯಾಸಿಗಳಲ್ಲಿ ಬ್ರಹ್ಮಸೂತ್ರಾಧ್ಯಯನವನ್ನು ಮಾಡಿದರೆಂದು ಹೇಳಲ್ಪಟ್ಟಿದೆ. ಈ ವಿಷಯದಲ್ಲಿ ಭಟ್ಟಕುಮಾರರ ಚಿತಾರೋಹಣ ಕಾಲದಲ್ಲಿ ಶ್ರೀಶಂಕರಾಚಾರ್ಯರ ಸಮಾಗಮವಾಯಿತೆಂದು ನಿರೂಪಿಸುವ ಶಂಕರವಿಜಯದ ವಿರೋಧವು ಬರುತ್ತದೆ. ಆದರೆ ಆ ಕಾಲದಲ್ಲಿ ಪ್ರಚುರವಾಗಿದ್ದ ಕಥೆಯನ್ನನುಸರಿಸಿಯೇ ಅಥವಾ ಅವರವರು ಕೇಳಿದಂತೆಯೆ ಆ ಗ್ರಂಥಗಳನ್ನು ಹೊಂದಿಸಿಕೊಳ್ಳಬಹುದು. ಅವುದು ಸತ್ಯವೋ ಅವುದು ಕಲ್ಪಿತವೋ ಎಂಬುದನ್ನು ನಿಶ್ಚಯಿಸುವುದಕ್ಕೆ ಸಾಧಕಗಳಿರುವುದಿಲ್ಲ.

45ನೆಯದರಿಂದ 49ರ ವರೆಗೂ ಭಾಟ್ಟ ಪ್ರಾಭಾಕರ ಮತಗಳ ಪ್ರವೃತ್ತಿಯೂ, ಶಾಂಕರಭಾಷ್ಯಾದಿಗಳ ಪ್ರವೃತ್ತಿಯೂ, ಶಾಂಕರವಾದದ ಅಸ್ವಾರಸ್ಯವೂ ನಿರೂಪಿಸಲ್ಪಟ್ಟಿದೆ. ಇದು ಅವರವರ ಸಿದ್ಧಾಂತಪ್ರಕಾರವಾಗಿ ನಿರೂಪಿಸಲ್ಪಟ್ಟಿರುವುದರಿಂದ ಅನುಚಿತವಲ್ಲ.

50ನೆಯ ಶ್ಲೋಕದಲ್ಲಿ ಭಾಸ್ಕರಾಚಾರ್ಯರು ಶಾಂಕರಭಾಷ್ಯಕ್ಕೆ ಖಂಡನ ಮಾಡಿದರೆಂದು ಹೇಳಲ್ಪಟ್ಟಿದೆ. ಇದು ಆ ಭಾಷ್ಯಗಳನ್ನು ನೋಡಿದವರಿಗೆ ಸ್ಪಷ್ಟವೆ.

51–52ರಲ್ಲಿ ಅದ್ವೈತಮತವು ಪ್ರಚಾರಕ್ಕೆ ಬಂದ ರೀತಿಯು ನಿರೂಪಿಸಲ್ಪಟ್ಟಿದೆ. ಅದು ಈ

ಗ್ರಂಥಕಾರರ ಅಭಿಪ್ರಾಯವಾಗಿರುತ್ತದೆ. ಒಂದು ಮತದವರು ಮತ್ತೊಂದು ಮತದ ಪ್ರಚಾರವು ನ್ಯಾಯಮಾರ್ಗದಿಂದ ಆಯಿತೆಂದು ಹೇಳದೆ ಇರುವುದು ಸಹಜವಲ್ಲವೆ?

7ನೆಯ ಸರ್ಗದಲ್ಲಿ-

ಆರಂಭದಲ್ಲಿ 8ನೆಯ ಶ್ಲೋಕದವರೆಗೂ ವಿಶ್ವರೂಪಾಚಾರ್ಯರ ಕೂಡ ಶಂಕರಾಚಾರ್ಯರಿಗೆ ಜಲ್ಪಕಥೆಯು ನಡೆದ ಕ್ರಮವು, ತತ್ಕಾರಣವು, ಆಗ ಪರಾಜಿತರಾದ ವಿಶ್ವರೂಪಾಚಾರ್ಯರಿಗೆ ಸಂನ್ಯಾಸಪ್ರಾಪ್ತಿಯು, ಅವರ ಪತ್ನಿಯು ಶಂಕರಾಚಾರ್ಯರಲ್ಲಿ ಅನುರಕ್ತಳಾದಳೆಂಬುದು ನಿರೂಪಿಸಲ್ಪಟ್ಟಿದೆ. ಈ ವಿಷಯದಲ್ಲಿ ಶಂಕರವಿಜಯಗಳನ್ನು ಅನುಸರಿಸಿ ಪರ್ಯಾಲೋಚಿಸುವಾಗ ವಿಶ್ವರೂಪಾಚಾರ್ಯರು ಬ್ರಹ್ಮಾಂಶಸಂಭೂತರೆಂತಲೂ, ಅವರೇ ಸಂನ್ಯಸ್ತರಾಗುವುದಕ್ಕೆ ಪೂರ್ವ ಮಣ್ಡನಮಿಶ್ರರೆಂದು ವ್ಯವಹರಿಸಲ್ಪಡುತ್ತಿದ್ದು ಸಂನ್ಯಾಸಾನಂತರದಲ್ಲಿ ಸುರೇಶ್ವರಾಚಾರ್ಯರೆಂದು ಹೆಸರು ಪಡೆದರೆಂತಲೂ, ಅವರ ಪತ್ನಿ ಸರಸ್ವತಿಯೆಂತಲೂ, ತಮ್ಮ ಪತಿಯ ಪರಾಜಯಾ ನಂತರದಲ್ಲಿ ಶ್ರೀ ಶಂಕರಾಚಾರ್ಯರಿಗೆ ಲಭಿಸಿದ ಜಯವನ್ನು ಒಪ್ಪದೆ ತನ್ನನ್ನೂ ಜಯಿಸಿ ಈ ಜಯವನ್ನು ಸ್ಥಾಪಿಸಿಕೊಳ್ಳಬಹುದೆಂದು ವಿಶ್ವರೂಪಪತ್ನಿಯ ಪ್ರಾರ್ಥನಾಪ್ರಕಾರ ವಿಚಾರ ನಡೆದಾಗ ಕಾಮಶಾಸ್ತ್ರದಲ್ಲಿ ಆಕೆಯನ್ನು ಜಯಿಸುವುದು ಸಾಧ್ಯವಲ್ಲದೇ ಹೋಗಲು, ಕಾಮಶಾಸ್ತ್ರಾನು ಭವಕ್ಕಾಗಿ ತತ್ಕಾಲದಲ್ಲಿ ಮೃತನಾಗಿದ್ದ ಒಬ್ಬ ರಾಜನ ಶರೀರದಲ್ಲಿ ಶ್ರೀಶಂಕರಾಚಾರ್ಯರು ಪ್ರವೇಶ ಮಾಡಿ ರಾಜಪತ್ನಿಯರೊಂದಿಗೆ ಕ್ರೀಡಿಸುವುದರಿಂದ ಕಾಮಶಾಸ್ತ್ರ ಪ್ರಕ್ರಿಯೆಗಳನ್ನು ಚೆನ್ನಾಗಿ ಅರಿತು ವಿಶ್ವರೂಪತ್ನಿಯನ್ನೂ ಜಯಿಸಿದರೆಂತಲೂ, ತದಾರಭ್ಯ ಶ್ರೀಶಂಕರಾಚಾರ್ಯರ ಜೊತೆಗೆ ವಿಶ್ವರೂಪ ಪತ್ನಿಯು ಇದ್ದಳೆಂತಲೂ ಸ್ಪಷ್ಟವಾಗುತ್ತದೆ. ಈ ಮಣಿಮಂಜರಿಯಲ್ಲಿ ಹೇಳಿರತಕ್ಕ ಕಥೆಯನ್ನು ಮೇಲೆ ಹೇಳಿದ ಶಂಕರವಿಜಯೋಕ್ತ ಕಥೆಗಳನ್ನು ಹೋಲಿಸುವಲ್ಲಿ ವಿಶ್ವರೂಪಾಚಾರ್ಯರಿಗೂ ಶ್ರೀ ಶಂಕರಾಚಾರ್ಯರಿಗೂ ನಡೆದ ವಿಚಾರದಲ್ಲಿ ವಿಶ್ವರೂಪಾಚಾರ್ಯರ ಪರಾಜಯವೂ, ಸಂನ್ಯಾಸ ಪ್ರಾಪ್ತಿಯೂ, ಅವರ ಪತ್ನಿಯು ಸಂಕರಾಚಾರ್ಯರನ್ನು ಅನುಸರಿಸಿ ಇದ್ದುದು ಈ ವಿಷಯಗಳಲ್ಲಿ ಐಕಕಂಠ್ಯ ಬರುತ್ತದೆ. ಇನ್ನು ಮಣಿಮಂಜರಿಯಲ್ಲಿ ಹೇಳಿರುವಂತೆ ಜಲ್ಪಕಥೆಗೆ ಪೂರ್ವದಲ್ಲಿಯೂ, ಅನಂತರದಲ್ಲಿಯೂ ವಿಶ್ವರೂಪಪತ್ನಿಗೆ ಶ್ರೀ ಶಂಕರಾಚಾರ್ಯರಲ್ಲಿ ಅನುರಾಗವಿತ್ತೆಂಬುದು ಶಂಕರವಿಜಯಗಳಿಂದ ಲಭಿಸದೇ ಇದ್ದರೂ, ಮಣಿಮಂಜರೀಕಾರರ ನಿರೂಪಣವು ಆ ಕಾಲದ ಜನಪ್ರವಾದವನ್ನನುಸರಿಸಿದುದಾಗಿರಬಹುದು. ಅಲ್ಲದೆ ಶಂಕರ ವಿಜಯಗಳಲ್ಲಿ ಉಕ್ತವಾದ ಕಥೆಗಳ ಆಧಾರದಿಂದ ವಿಚಾರ ಮಾಡತಕ್ಕ ನಿಷ್ಪಕ್ಷಪಾತಿ ಜನಗಳಿಗೆ ಮೇಲೆ ಹೇಳಿದ ಪೂರ್ವೋತ್ತರಾನು ರಾಗಗಳು ಅನುಮಾನ ಪ್ರಮಾಣದಿಂದ ಸಿದ್ಧವಾಗುತ್ತವೆ. ಹೇಗೆ ಎಂದರೆ- ವಿಶ್ವರೂಪಾ ಚಾರ್ಯರಿಗೂ ಶಂಕರಾಚಾರ್ಯರಿಗೂ ಜಲ್ಪಕಥೆಯು ನಡೆಯುವುದಕ್ಕೆ ಪೂರ್ವದಲ್ಲಿ ಮಧ್ಯಸ್ಥರನ್ನು ನಿಯಮಿಸಲು ವಿಶ್ವರೂಪರ ಪತ್ನಿಯನ್ನು ಅರ್ಹಳೆಂದು ಲೋಕನ್ಯಾಯವನ್ನನುಸರಿಸಿ ಶಂಕರಾ ಚಾರ್ಯರು ಒಪ್ಪುವುದಕ್ಕೆ ಕಾರಣವಿರುವುದಿಲ್ಲ. ಇನ್ನು ಮಧ್ಯಸ್ಥಳಾಗಕೂಡದೆಂದು ಆಕ್ಷೇಪಿಸುವುದಕ್ಕೆ ಪ್ರತಿವಾದಿ ಪತ್ನಿಯೆಂಬ ಕಾರಣವಿರುತ್ತದೆ. ಹೀಗಿದ್ದರೂ ಕೂಡ ಶ್ರೀಶಂಕರಾಚಾರ್ಯರು ಆಕೆಯನ್ನು

ಮಧ್ಯಸ್ಥಳಾಗಿರಲು ಒಪ್ಪಬೇಕಾದರೆ ಆಕೆಗೂ ತಮಗೂ ಇರುವ ಅನುರಾಗದ ಭರವಸೆಯೇ ಕಾರಣವೆಂದು ಹೇಳಬೇಕಲ್ಲವೆ. ಲೋಕದಲ್ಲಿ ವಾದಿ ಪ್ರತಿವಾದಿಗಳಲ್ಲಿ ಒಬ್ಬರಿಗೂ ಸಂಬಂಧ ಪಡದವರನ್ನಾಗಲಿ, ಸಮಾನಸಂಬಂಧ ಉಳ್ಳವರನ್ನಾಗಲಿ ಮಧ್ಯಸ್ಥರಾಗಿರಲು ಒಪ್ಪುತ್ತಾರೆಯೇ ಹೊರತು ವಾದಿ ಪ್ರತಿವಾದಿಗಳಲ್ಲಿ ಒಬ್ಬರಿಗೇ ಸಂಬಂಧಿಸಿದವರನ್ನು ಎಂತಹ ಭ್ರಾಂತನೂ ಒಪ್ಪುವುದಿಲ್ಲ. ಈ ಪ್ರಕಾರ ಪೂರ್ವಾನುರಾಗಕ್ಕೆ, ವಿಶ್ವರೂಪಪತ್ನಿಯ ಮಧ್ಯಸ್ಥಿಕೆಯ ವಿಷಯದಲ್ಲಿ ಶ್ರೀಶಂಕರಾಚಾರ್ಯರ ಅಂಗೀಕಾರವೇ ಪ್ರಮಾಣವೆಂದು ಸಿದ್ಧಿಸಿತು.

ಉತ್ತರಾನುರಾಗವನ್ನು ಇದೇ ರೀತಿಯಾಗಿ ಅನುಮಾನದಿಂದಲೇ ಸಿದ್ಧಪಡಿಸಬಹುದು. ವಿಶ್ವರೂಪಾಚಾರ್ಯರಿಗೆ ಸಂನ್ಯಾಸವಾದ ಅನಂತರದಲ್ಲಿ ವಿಶ್ವರೂಪಪತ್ನಿಯು ಶ್ರೀಶಂಕರಾಚಾರ್ಯರೊಂದಿಗೆ ಅನೇಕ ಶಾಸ್ತ್ರಗಳಲ್ಲಿ ವಿಚಾರಮಾಡಿ ಪರಾಜಿತಳಾದಂತೆಯೇ ಕಾಮಶಾಸ್ತ್ರ ವಿಷಯದಲ್ಲಿಯು ಶಾಸ್ತ್ರವಿಚಾರ ಮಾತ್ರದಿಂದಲೇ ಪರಾಜಿತಳಾಗಿದ್ದರೆ ಸಮನಾಗಿತ್ತು. ಹಾಗಲ್ಲದೆ ಕಾಮಶಾಸ್ತ್ರದಲ್ಲಿ ಜಯಪರಾಜಯ ವ್ಯವಸ್ಥೆಯು ಶ್ರೀಶಂಕರಾಚಾರ್ಯರಿಗೇ ರಾಜಪತ್ನಿಯರ ಸಂಭೋಗದಿಂದ ಉಂಟಾದ ಜ್ಞಾನದ ಸಹಾಯದಿಂದಲೇ ಆಗಿರುವುದಾಗಿ ಶಂಕರವಿಜಯಗಳೇ ಘೋಷಿಸುತ್ತವೆ. ಶಂಕರಾಚಾರ್ಯರಿಗೆ ಕಾಮಶಾಸ್ತ್ರದ ಜ್ಞಾನವು ಪೂರ್ವದಲ್ಲೆ ಇತ್ತಲ್ಲವೆ? ಯತಿಗಳಾದುದರಿಂದ ಕ್ರಿಯಾಜನ್ಯಜ್ಞಾನ ಮಾತ್ರ ಇರಲಿಲ್ಲವೆಂದು ಹೇಳಬೇಕು. ಶಾಸ್ತ್ರವಿಷಯಗಳಲ್ಲಿ ಮಾತ್ರವೇ ಜಯವಾಗಿರುವ ಪಕ್ಷದಲ್ಲಿ ಸಂಭೋಗಾನುಭವದ ಅವಶ್ಯಕತೆ ಇರುವುದಿಲ್ಲ. ಸಂಭೋಗದ ಅನಂತರದಲ್ಲಿ ಸಂಪಾದಿಸಿದ ಚಾತುರ್ಯದಿಂದ ಜಯವನ್ನು ಪಡೆಯಬೇಕಾದರೆ ವಿಶ್ವರೂಪ ಪತ್ನಿಯ ಸಂಭೋಗವು ನಡೆದಿರಬೇಕೆಂಬುದು ಸಿದ್ಧಿಸುತ್ತದೆ. ಆದುದರಿಂದ ಈ ವಿಷಯವು ಕೂಡ ಕಲ್ಪಿತವೆಂದು ಹೇಳಲಾಗುವುದಿಲ್ಲ.

8ನೆಯ ಶ್ಲೋಕದ ಉತ್ತರಾರ್ಧ ಮೊದಲು 12ನೆಯ ಶ್ಲೋಕದವರೆಗೂ ಶಂಕರಾಚಾರ್ಯರಿಗೂ ಮಂಡನಮಿಶ್ರರಿಗೂ ನಡೆದ ಛಲೋತ್ತರಗಳು ಮತ್ತು ಮಂಡನಮಿಶ್ರರು ಶಂಕರಾಚಾರ್ಯರನ್ನು ಅನುವರ್ತಿಸಿದ ಪ್ರಕಾರವು ಹೇಳಲ್ಪಟ್ಟಿದೆ. ಇವುಗಳಲ್ಲಿ ಛಲೋತ್ತರಗಳೆಲ್ಲವೂ ಶಂಕರವಿಜಯಗಳಲ್ಲೆ *ಇನ್ನೂ ಹೆಚ್ಚಾಗಿ ನಿರೂಪಿತವಾಗಿವೆ. ಅನುವರ್ತನ ಪ್ರಕಾರವು ಲೋಕನ್ಯಾಯವನ್ನು ಅನುಸರಿಸಿ ಸಂಭಾವಿತವಾಗಿದೆ.

13ನೆಯ ಶ್ಲೋಕದಿಂದ 15ನೆಯ ಶ್ಲೋಕದವರೆಗೂ ಶ್ರೀಶಂಕರಾಚಾರ್ಯರಿಗೆ ತೋಟಕಾದಿ ಶಿಷ್ಯಚತುಷ್ಟಯ ಮೂಲಕ ಪರಮ್ಪರಾಭಿವೃದ್ಧಿಯಾದ ವಿಷಯವು ನಿರೂಪಿತವಾಗಿದೆ. ಈ ವಿಷಯಕ್ಕೆ 15ನೆಯ ಶ್ಲೋಕದ ನಮ್ಮ ಸಂಸ್ಕೃತ ವ್ಯಾಖ್ಯಾನದಲ್ಲಿ ಸ್ಕಾಂದಪುರಾಣ ವಚನಗಳು ಪ್ರಮಾಣವಾಗಿ ಬರೆಯಲ್ಪಟ್ಟಿವೆ.

---

* ಮೇಲೆ ತೋರಿಸಿರುವ ಆನಂದಗಿರಿ ಶಂಕರವಿಜಯದಲ್ಲಿ 241ನೆಯ ಪುಟದಲ್ಲಿ ನೋಡಬಹುದು. ಮತ್ತು ಮಾಧವೀಯ ಶಂಕರವಿಜಯದ 8ನೆಯ ಸರ್ಗ 300ನೆಯ ಪುಟದಲ್ಲಿಯು ನೋಡಬಹುದು.

16ನೆಯ ಶ್ಲೋಕದಿಂದ ಸರ್ಗಾಂತ್ಯದವರೆಗೂ ಶ್ರೀಶಂಕರಾಚಾರ್ಯರು ತಮ್ಮ ತಾಯಿಯ ಅಂತ್ಯೇಷ್ಟಿಯನ್ನು ಮಾಡಿದನಂತರ ಭಗಂದರಾದಿ ರೋಗದಿಂದ ಪೀಡಿತರಾಗಿ ಮೃತಿಹೊಂದಿದ ಪ್ರಕಾರವು ಹೇಳಲ್ಪಟ್ಟಿದೆ. ಅದರಲ್ಲಿ ಮಾತೃಕೃತ್ಯವನ್ನು ನೆರವೇರಿಸಿದ ವಿಷಯದಲ್ಲಿ ಪೂರ್ವದಲ್ಲಿ ನಾವು ತೋರಿಸಿರುವ ಪ್ರಕಾರ ಹೆಚ್ಚು ವಿವರಣೆಯನ್ನು ಗ್ರಂಥಕಾರರು ಬಿಟ್ಟಿರುತ್ತಾರೆ. ಇದರಿಂದ ಪರದೂಷಣದಲ್ಲಿಯೇ ಗ್ರಂಥರಕಾರರಿಗೆ ತಾತ್ಪರ್ಯ ಇತ್ತೆಂದು ಹೇಳಲಾಗುವುದಿಲ್ಲ. ಭಗಂದರಾದಿ ರೋಗಪ್ರಾಪ್ತಿ ವಿಷಯದಲ್ಲಿ ಮಾಧವೀಯ ಶಂಕರವಿಜಯದ 16ನೆಯ ಸರ್ಗದಲ್ಲಿ ಅನೇಕ ಶ್ಲೋಕಗಳು ಪ್ರಮಾಣವಾಗಿರುತ್ತವೆ. ಇತರ ಶಂಕರವಿಜಯ ಗ್ರಂಥಗಳಲ್ಲಿಯೂ ಈ ವಿಷಯವು ಹೇಳಲ್ಪಟ್ಟಿದೆ. ಉಳಿದ ವಿಷಯಗಳು ಗ್ರಂಥಕಾರರ ಕೇಳುವಿಕೆಯ ಪ್ರಕಾರ ಬರೆಯಲ್ಪಟ್ಟಿರಬಹುದು.

8ನೆಯ ಸರ್ಗದಲ್ಲಿ ಶ್ರೀ ಶಂಕರಾಚಾರ್ಯರ ಅನಂತರ ಅವರ ಶಿಷ್ಯವರ್ಗದವರು ಪರತೀರ್ಥಾದಿ ಪರಂಪರೆಯಲ್ಲಿದ್ದ ಸಶಿಷ್ಯರಾದ ಪ್ರಾಜ್ಞತೀರ್ಥರನ್ನು ಅನೇಕ ವಿಧದಲ್ಲಿ ತೊಂದರೆಪಡಿಸಿದ ಪ್ರಕಾರವನ್ನು, ಆಗ ಅವರು ಅನುಸರಿಸಿದ ಉಪಾಯಗಳನ್ನು, ಅವರ ಪರಂಪರೆಯಲ್ಲಿ ಅಚ್ಯುತಪ್ರೇಕ್ಷರೆಂಬ ಸಂನ್ಯಾಸಿಗಳ ದೆಸೆಯಿಂದ ದುರ್ಮತಖಂಡನ ಪೂರ್ವಕವಾಗಿ ಸನ್ಮತಪ್ರವರ್ತನಕ್ಕಾಗಿ ಅವತರಿಸಿದ ವಾಯ್ವಂಶಭೂತರಾದ ಶ್ರೀಮದಾಚಾರ್ಯರಿಗೆ ಸಂನ್ಯಾಸ ಪ್ರಾಪ್ತಿಯನ್ನು ಅವರ ಭಾಷ್ಯಾದಿ ಗ್ರಂಥನಿರ್ಮಾಣವನ್ನು ಪ್ರತಿಪಾದಿಸಿ ಗ್ರಂಥವನ್ನು ಮುಗಿಸಿರುತ್ತಾರೆ. ಈ ವಿಷಯಗಳು ಸಹಜವಾದುದರಿಂದ ವಿವಾದಾಸ್ಪದವಾಗಿರುವುದಿಲ್ಲ.

ಈ ಪ್ರಕಾರ ಮಣಿಮಂಜರೀ ಗ್ರಂಥದಲ್ಲಿ ಮತಾಂತರ ದ್ವೇಷದಿಂದ ಕಲ್ಪಿತವಾದ ಪರದೂಷಣ ಕಥೆಗಳು ನಿರೂಪಿತವಾಗಿವೆ ಎಂಬುದು ಅಸಂಗತವೆಂದು ತೋರಿಸಲ್ಪಟ್ಟಿತು. ಈಗ ಈ ಕಥೆಗಳು ವಾಸ್ತವವಾದುವೆಂದು ಒಪ್ಪುವ ಪಕ್ಷದಲ್ಲಿಯು ಆವ ವಿಧವಾದ ಹಾನಿಯು ಮತಾಂತರದವರಿಗೆ ಇರುವುದಿಲ್ಲವಾದ ಕಾರಣ ಈ ಕಥೆಗಳನ್ನು ಕಲ್ಪಿತವೆಂದು ಹೇಳುವುದು ಅಯುಕ್ತವೆಂತ ನಿರೂಪಿಸಲ್ಪಡುತ್ತದೆ. ಇವುಗಳಲ್ಲಿ ಶ್ರೀಶಂಕರಾಚಾರ್ಯರ ಉತ್ಪತ್ತಿಯ ಕಥೆಯು ಮುಖ್ಯವಾಗಿ ತನ್ಮತದವರ ಅಂಗೀಕಾರಕ್ಕೆ ಅರ್ಹವಲ್ಲದೆ ಇರಬಹುದು; ಅದು ಸರಿಯಲ್ಲ. ಮಹಾತ್ಮರನೇಕರು ಇದೇ ರೀತಿಯಾಗಿ ಪುರುಷ ಸಂಬಂಧವಿಲ್ಲದೆ ಜನ್ಮವನ್ನು ಪಡೆದರೆಂಬುದನ್ನು ಇತರ ಮತದವರನೇಕರು ದೊಡ್ಡ ಮಹಿಮೆಯನ್ನಾಗಿ ತಿಳಿದಿದ್ದಾರೇ ಹೊರತು ಕೊರತೆಯನ್ನೆಣಿಸಿ ರುವುದಿಲ್ಲ. ಆ ರೀತಿಯಾಗಿ ಭಗವದಂಶರಾದ ಮಹಾತ್ಮರು ಜನಿಸಿದರೆಂಬುದು ಅವರಿಗೆ ಭೂಷಣವೇ. ಆದರೆ ಅವರಲ್ಲಿ ವಿಶ್ವಾಸವಿಲ್ಲದ ಮತಾಂತರದವರು ಮಾತ್ರ ಪತಿಸಂಬಂಧವಿಲ್ಲದೇ ಸ್ತ್ರೀಮೂಲಕ ಜನನವು ವ್ಯಭಿಚಾರಕ್ಕೆ ದ್ಯೋತಕವೆಂದು ಅಭಿಪ್ರಾಯ ಪಡುವ ಮಾತ್ರದಿಂದ ವಾಸ್ತವ ವಾದ ಕಥೆಯನ್ನು ಬದಲಾಯಿಸಬೇಕೆಂದು ಇಚ್ಛೆಸುವುದು, ತದನುಸಾರ ಲೋಕಸಿದ್ಧಕ್ರಮದಿಂದ ಜನನವಾಯಿತೆಂದು ಪ್ರತಿಪಾದಿಸುವ ಹೊಸಗ್ರಂಥಗಳನ್ನು ನಿರ್ಮಾಣ ಮಾಡುವುದು, ಆ ಹೊಸ ಗ್ರಂಥಗಳಿಗೆ ಪ್ರಾಚೀನರನ್ನು ಕರ್ತೃಗಳೆಂದು ನಿರ್ದೇಶಿಸುವುದು ಇತ್ಯಾದಿಗಳು ಯುಕ್ತವಲ್ಲ. ಶಂಕರವಿಜಯ ಗ್ರಂಥಗಳಲ್ಲಿ ಆನಂದಗಿರೀಯವು ಪ್ರಾಮಾಣಿಕವೆಂದು ಹೇಳುವುದಕ್ಕೆ ಅನೇಕ

ಸಾಧನಗಳಿವೆ. ಆನಂದಗಿರಿ ಎಂಬುವರು ಶ್ರೀ ಶಂಕರಾಚಾರ್ಯರ ಸಾಕ್ಷಾತ್ ಶಿಷ್ಯರೆಂತ ಪ್ರಸಿದ್ಧಿ ಇದೆ. ಅವರು ಶಂಕರಾಚಾರ್ಯರ ಅನೇಕ ಗ್ರಂಥಗಳಿಗೆ ವ್ಯಾಖ್ಯಾನಗಳನ್ನೂ ಮಾಡಿರುತ್ತಾರೆ. ಅವರ ಶಂಕರವಿಜಯದಲ್ಲಿ ಮೇಲೆ ನಾವು ತೋರಿಸಿರುವ ಪ್ರಕಾರ ಪತಿಸಂಬಂಧವಿಲ್ಲದೇ ಭಗವತ್ಕಳಾ ಪ್ರವೇಶದಿಂದ ಜನನವಾಯಿತೆಂದು ನಿರೂಪಿಸಲ್ಪಟ್ಟಿರುವುದು ಸ್ಪಷ್ಟವೆ. ಹೀಗಿರುವಲ್ಲಿ ಅದನ್ನು ಒಪ್ಪದೆ ದಾಂಪತ್ಯ ಕ್ರಮದಿಂದ ಪರಿಶುದ್ಧಾಚಾರದಲ್ಲಿದ್ದ ಮಾತಾಪಿತೃಗಳ ಮೂಲಕ ಶ್ರೀಶಂಕರಾಚಾರ್ಯರ ಅವತಾರವಾಯಿತೆಂಬುದೇ ಅವರ ಮಹಿಮೆಯನ್ನು ಹ್ರಾಸಪಡಿಸುತ್ತದೆಂದು ಅಭಿಜ್ಞರು ಯೋಚಿಸಬಹುದು. ಇತರರು ದೂಷಿಸುತ್ತಾರೆಂಬುದು ಮುಖ್ಯವಲ್ಲ. ಅದಕ್ಕಾಗಿ ಸತ್ಯವನ್ನು ಮರೆಮಾಚಬಾರದು.

ಮಾಧವೀಯವೆಂದು ಕರೆಯಲ್ಪಡುವ ಶಂಕರವಿಜಯವು ವಾಸ್ತವವಾಗಿ ಶ್ರೀಮಾಧವಾಚಾರ್ಯರಿಂದ ರಚಿತವೆಂದು ಹೇಳುವುದಕ್ಕೆ ಅನೇಕ ಬಾಧಕಗಳಿವೆ. ಅವುಗಳಲ್ಲಿ ಮುಖ್ಯವಾದುವು ಆ ಶಂಕರವಿಜಯದ ಪೀಠಿಕೆಯ ಶ್ಲೋಕಗಳಲ್ಲಿರುವ ಗ್ರಂಥಕಾರರ ಸ್ವೋಕ್ತಿಗಳೆ. ಹೇಗೆ ಎಂದರೆ—

''नेतायत्रोल्लसति भगवत्पादसंज्ञोमहेशः
शांतिर्यत्रप्रचकतिरसः शेषवानुज्वलाद्यैः ।
यत्राविद्याक्षतिरपिफलं तस्यकाव्यस्यकर्ता
धन्योव्यासाचलकविवरः तत्कृतिज्ञाश्चधन्याः''

ಎಂಬ 17ನೆಯ ಶ್ಲೋಕವಿದೆ. ಇದರಲ್ಲಿ ಕವಿನಾಮವು 'ವ್ಯಾಸಾಚಲ' ಎಂದು ಹೇಳಲ್ಪಟ್ಟಿದೆ. ಶ್ರೀಮಾಧವಾಚಾರ್ಯರಿಗೆ 'ವ್ಯಾಸಾಚಲ' ಎಂಬ ಹೆಸರು ಇದ್ದಂತೆ ಅವರ ಗ್ರಂಥಗಳಲ್ಲಿ ಆವದರಲ್ಲಿಯೂ ತಿಳಿದುಬರುವುದಿಲ್ಲ. ಮತ್ತು ಪ್ರಸಿದ್ಧಿಯೂ ಇಲ್ಲ. ಆದರೆ ವ್ಯಾಸಾಚಲ ಪದಕ್ಕೆ ವ್ಯಾಸರಂತೆ ಅಚಲರು ಎಂದರೆ ಸ್ಥಿರರಾದವರು ಎಂದು ಕೆಲವರು ಅರ್ಥವನ್ನು ಹೇಳುತ್ತಾರೆ. ಅದು ಈ ಶ್ಲೋಕಕಾರರಿಗೆ ಅಭಿಪ್ರೇತವಲ್ಲ. ಈ ಶ್ಲೋಕದಲ್ಲಿ ಕಾವ್ಯನಾಯಕರನ್ನು ''ಭಗವತ್ಪಾದಸಂಜ್ಞೋ ಮಹೇಶಃ' ಎಂತಲು, ರಸವನ್ನು ಶಾಂತಿಪದದಿಂದಲು, ಫಲವನ್ನು 'ಅವಿದ್ಯಾಕ್ಷತಿ' ಪದದಿಂದಲು ಹೇಳಿರುವಂತೆ ಕವಿಯನ್ನು ವ್ಯಾಸಾಚಲ ಪದದಿಂದ ಹೇಳಿರುತ್ತಾರೆ. ಮೇಲೆ ಹೇಳಿದಂತೆ ಅರ್ಥ ಮಾಡುವ ಪಕ್ಷದಲ್ಲಿ ಕವಿ ಇಂತಹವರೆಂದು ಸ್ಪಷ್ಟವಾಗಿ ಹೇಳಿದಂತಾಗುವುದಿಲ್ಲ. ಎಲ್ಲವನ್ನೂ ಸ್ಪಷ್ಟವಾಗಿ ಹೇಳಿ ಕವಿಯನ್ನು ಮಾತ್ರ ಸ್ಪಷ್ಟಪಡಿಸದೆ ಇರುವುದು ಉತ್ತಮಕವಿಗೆ ಉಚಿತವಲ್ಲ. ಆದುದರಿಂದ ವ್ಯಾಸಾಚಲಪದವು ಕವಿನಾಮವೆಂತಲೇ ಹೇಳಬೇಕು. ಅಲ್ಲದೆ ಇದೇ ಸರ್ಗದ 9ನೆಯ ಸರ್ಗ ಮತ್ತು 10 ನೆಯ ಶ್ಲೋಕಗಳಲ್ಲಿ ಈ ಕವಿಗೆ 'ನವಕಾಳಿದಾಸ' ಎಂಬ ಬಿರುದನಾಮವು ಹೇಳಲ್ಪಟ್ಟಿದೆ. ಶ್ರೀಮಾಧವಾಚಾರ್ಯರಿಗೆ ಈ ಬಿರುದು ಇದ್ದುದಾಗಿ ಆವ ಆಧಾರದಿಂದಲೂ ತಿಳಿದುಬರುವುದಿಲ್ಲ. ಮತ್ತು ಇಂತಹ ಬಿರುದನ್ನು ಅಂಗೀಕರಿಸತಕ್ಕ ಕವಿಯು ಕಾಳಿದಾಸನಕಿಂತಲು

ಯೋಗ್ಯತೆಯಲ್ಲಿ ಹೀನನಾಗಿರಬೇಕಲ್ಲವೆ? ಶ್ರೀಮಾಧವಾಚಾರ್ಯರು ಸರ್ವಜ್ಞರೆಂದು ಪ್ರಸಿದ್ಧಿಪಡೆದವರಾಗಿರುತ್ತಾರೆ. ಅಂತಹವರು ಕವಿಮಾತ್ರನಾದ ಕಾಳಿದಾಸನ ಹೆಸರಿನಿಂದ ತಮಗೆ ಗೌರವ ಬರುತ್ತದೆಂದು ಆ ನಾಮವನ್ನು ಬಿರುದಾಗಿ ಒಪ್ಪಿದರೆಂಬುದು, ಅದನ್ನು ಇತರ ಆವ ಗ್ರಂಥಗಳಲ್ಲಿಯೂ ಹೇಳಿಕೊಳ್ಳದೆ ಈ ಶಂಕರವಿಜಯದಲ್ಲಿ ಮಾತ್ರ ಹೇಳಿಕೊಂಡಿದ್ದಾರೆಂತಲೂ ಕಲ್ಪಿಸುವುದು ಆವ ರೀತಿಯಿಂದಲೂ ಯುಕ್ತವೆಂದು ಕಾಣುವುದಿಲ್ಲ. ಇನ್ನೂ ಅನೇಕ ಕಾರಣಗಳಿವೆ. ವಿಸ್ತರಭಯದಿಂದ ಸಂಕ್ಷೇಪಿಸಿರುತ್ತೇವೆ. ಆದ ಕಾರಣ ವ್ಯಾಸಾಚಲರೆಂಬ ಕವಿಯಿಂದ ರಚಿಸಲ್ಪಟ್ಟ ಈ ಶಂಕರವಿಜಯವು ಕಲ್ಪಿತವಾದ ಕೆಲವು ಕಥೆಗಳಿಂದ ಯುಕ್ತವಾಗಿರುವುದರಿಂದ ಜನಗಳ ಅನಾದರಣೆಗೆ ಪಾತ್ರವಾಗಬಾರದೆಂದು ಮಾಧವೀಯವೆಂದು ವ್ಯವಹಾರಕ್ಕೆ ಪಾತ್ರವಾಗುವಂತೆ ಇತರರು ಕಲ್ಪಿಸಿರುತ್ತಾರೆಯೇ ಹೊರತು ವಾಸ್ತವವಾಗಿ ಮಾಧವೀಯವಲ್ಲವೆಂದು ಅಭಿಜ್ಞರಿಗೆ ತೋರದೆ ಇರಲಾರದು. ಇದೇ ಪ್ರಕಾರವಾಗಿ ಅನೇಕ ಹೊಸ ಗ್ರಂಥಗಳು ಮೇಲೆ ಹೇಳಿದ ಅಭಿಪ್ರಾಯದಿಂದ ರಚಿಸಲ್ಪಟ್ಟಿರಬಹುದು. ಆದ ಕಾರಣ ಅದ್ವೈತಿಗಳು ಕೂಡ ಶ್ರೀಶಂಕರಾಚಾರ್ಯರ ಅವತಾರ ಕ್ರಮವನ್ನು ಆನಂದಗಿರಿ ಶಂಕರವಿಜಯದಲ್ಲಿ ಹೇಳಿರುವ ಪ್ರಕಾರ ಅಂಗೀಕರಿಸುವುದು ಯುಕ್ತವು. ಹಾಗಾಗುವುದರಲ್ಲಿ ಆನಂದಗಿರೀಯ ಪ್ರಕಾರ ಕೆಲವಂಶವನ್ನೂ ಕೇರಳೋತ್ಪತ್ತಿ ಪ್ರಕಾರ ಇತರವಾದ ಅಂಶಗಳನ್ನೂ ಗ್ರಹಿಸಿ ಮಣಿಮಂಜರೀಕಾರರು ನಿರೂಪಿಸಿರುವ ಅವತಾರ ಕ್ರಮವು ಅಸತ್ಯವೆಂದು ದೂಷಿಸುವುದಕ್ಕೆ ಅವಕಾಶವೆಷ್ಟುಮಾತ್ರವೂ ಇರುವುದಿಲ್ಲ. ತಮಗೆ ತಿಳಿದುಬಂದ ಕಥೆಗಳನ್ನು ಹೇಳುವಾಗ ಅವರು ವ್ಯಕ್ತಪಡಿಸಿರುವ ಸ್ವಾಭಿಪ್ರಾಯಗಳು ಮಾತ್ರ ಪರದೂಷಣೆಯಲ್ಲಿ ಪರ್ಯವಸಾನವನ್ನು ಹೊಂದಬಹುದು. ಒಂದು ಮತದವರು ಮತ್ತೊಂದು ಮತದವರ ವಿಷಯದಲ್ಲಿ ಪ್ರಸಿದ್ಧವಾದ ಚರಿತ್ರೆಗಳಿಗೆ ದೂಷಣೆಯಲ್ಲಿ ಪರ್ಯವಸಾನ ಮಾಡುವುದು ಸಹಜವಾಗಿರುತ್ತದೆ. ಆದುದರಿಂದ ಈ ಗ್ರಂಥದಲ್ಲಿ ಹೇಳಿರುವ ಕಥೆಗಳು ಕಲ್ಪಿತವಲ್ಲವೆಂದು ಹೇಳುವುದಕ್ಕೇನೂ ಬಾಧಕವಿಲ್ಲ. ಮುಖ್ಯವಾಗಿ ಮತಪ್ರವೃತ್ತಿ ಪ್ರಕಾರಗಳು ತತ್ತನ್ಮತ ಪ್ರವರ್ತಕರ ಕಾಲದೇಶಾದಿಗಳು ತಿಳಿಯುವುದಕ್ಕೆ ಈ ಗ್ರಂಥದ ವ್ಯಾಸಂಗವು ಆವಶ್ಯಕವಾಗಿರುತ್ತದೆ. ಆದುದರಿಂದ ಉಪೇಕ್ಷಾರ್ಹವಲ್ಲವೆಂದು ತಿಳಿಯತಕ್ಕುದು.

ಈ ಪ್ರಕಾರ ವಿಜ್ಞಾಪಿಸುವ,

**ರಾಯಪಾಳ್ಯ ರಾಘವೇಂದ್ರಾಚಾರ್ಯಃ**
ಅರಮನೆಯ ಧರ್ಮಾಧಿಕಾರಿ, ಮೈಸೂರು.

॥ ಶ್ರೀ ಗುರುರಾಜೋವಿಜಯತೇ ॥

# ಮಣಿಮಂಜರೀವೈಭವದ ಸಾರ ಸಂಗ್ರಹ

## ವೇದಾರಂಭ

ಜ್ಞಾನಸಂಪಾದನೆಗಾಗಿಯೇ ಜನಿಸಿದ ಜೀವಿಯಾದ ಮಾನವನು ಪಶುವಿನಂತೆ ಪ್ರಕೃತಿವಶವಾಗಿ ಬಾಳನ್ನು ನಡೆಸದೆ, ಜನನ-ರಸನಾದಿ ಇಂದ್ರಿಯಗಳ ನಿಯಂತ್ರಣಾದಿ ದುಃಸಾಧ್ಯ ಕ್ರಿಯಾಶೀಲನಾಗುತ್ತ ಗಳಿಸುವ ಅರಿವಿನ ಐಸಿರಿಯಾದರೂ ಎಂಥದ್ದೆಂದು ವಿಮರ್ಶಿಸುವ ಸಮಯ ಇದೀಗ ಮತ್ತೊಮ್ಮೆ ನಮ್ಮುಂದಿದೆ. ನಿರೀಕ್ಷಿಸಿದಂತೆ ಬರಬೇಕಾದ ಸಂತಸವೆಲ್ಲ ತಪ್ಪಿಹೋಗಿ, ಅನಿರೀಕ್ಷಿತವಾಗಿ ಬಂದಪ್ಪಳಿಸುವ ಶೋಕಸಂಕೋಲೆಯಲ್ಲಿ ಸಿಲುಕಿ ತೊಳಲಾಡುವ ಜೀವನದ ವಾಸ್ತವವನ್ನು ಒಮ್ಮೆ ಮೆಲಕು ಹಾಕಿದಾಗ, ನಾವು ಬಯಸಿದ್ದೇ ಆಗುವುದೆಂದು - ಅರಿತಿದ್ದೇ ಇರುವುದೆಂದು ಹಾರಾಡುವ ಸ್ವಾತಂತ್ರ್ಯದ ಲವಲೇಶವೂ ನಮಗಿಲ್ಲವೆಂದು ಮನದಟ್ಟಾಗಲು ಬಹಳ ಕಾಲ ಬೇಕಾಗಿಲ್ಲ. ಹಾಗಾದರೆ ನಾವೆಲ್ಲ ಅತಂತ್ರರೇ, ಪರತಂತ್ರರೇ? ಪರತಂತ್ರರೆಂದೇ ಆದಲ್ಲಿ ಆ ಪರನಾರು? ಇತ್ಯಾದಿ ವಿಧವಿಧದ ಪ್ರಶ್ನೆಗಳು ಸುಲಭವಾಗಿ ಮನದೊಳಗೆ ನುಸುಳುವಂತೆ, ಬಗೆಹರಿವುದು ಆಗವುದಿಲ್ಲವೆಂದು ನಿಶ್ಚಯಿಸಿ, ಮತ್ತೊಬ್ಬರ ಅನುಭವ ಮೂಲದ ಮಾತಿಗಾಗಿ ಅಂಗಲಾಚಲು ಈ ಅಭಿಮಾನಿ ಮಾನವ ಜೀವಿ ಮುಂದಾಗುತ್ತಾನೆ. ಆದರೆ ತನ್ನ ಅನುಭವದಲ್ಲಿ ಕಂಡುಕೊಂಡ ಸತ್ಯವನ್ನು ತಾ ಎಂದಿಗೂ ಬಿಡಲಾರದಂತೆ ಮತ್ತೊಬ್ಬರ ಮಾತಿಗೆ ಬೆಲೆ ನೀಡುವ ಬಗೆ ಅವನಿಗೆ ತಿಳಿದೋ-ತಿಳಿಯದೆಯೋ ರೂಢವೇ ಆಗಿರುತ್ತದೆ. ಒಂದೆಡೆ ಸುಳ್ಳಾಗಿ ಮತ್ತೆ ನಿಜವಾಗಿ ಹೊರಜನರ ಮಾತುಗಳ ಅಂತರವನ್ನು ಅನುಭವಿಸಿದ ಅವನು ಬೇರೆಯವರ ಮಾತೆಲ್ಲವನ್ನು ಸಹಜವಾಗಿ ನಂಬುವ ಸಮಯದಲ್ಲಿ ಹಿಂದೇಟು ಹಾಕುತ್ತ, ತನ್ನ ಮನದೊಳಗಿನ ಗೊಂದಲ ಬಗೆ ಹರಿಯದೆ ಒದ್ದಾಡುವಾಗ ಸಂದೇಹಕ್ಕೆ ಎಡೆಯಿಲ್ಲದ ನಿತ್ಯ ಸತ್ಯ ವೇದದ ಮಾತು ಸಿಕ್ಕಾಗ ಖುಷಿಗೊಳ್ಳುವ ಪರಿ ಬಣ್ಣಿಸಲಸದಳವು. ಅಪೌರುಷೇಯವಾದ ಆ ಮಾತಿಗೆ ಪುರುಷನ ದೋಷ ಸೋಕದಂತಾಗಿ, ಸಹಜವಾದ ನಂಬಿಕೆ ಅಲ್ಲಾಡದಂತೆ ಉಳಿದು ಪರಾ-ಪರ ವಸ್ತುವಿವೇಕದ ದಾರಿ ತೆರೆದಂತಾಗುತ್ತದೆ.

## ಪರವಸ್ತುವಿಗೆ ಅಪಾರ ಹೆಸರು

ವೇದಪ್ರತಿಪಾದ್ಯವಾದ ಆ ಪರವಸ್ತುವೇ ಪೂರ್ಣವಸ್ತು. ಅದು ಅಪೂರ್ಣವಾಗಿದ್ದಲ್ಲಿ ನಮ್ಮಂತೆ ಪರತಂತ್ರವೇ ಆಗಬೇಕಷ್ಟೆ. ಆದ್ದರಿಂದ ಆ ಸ್ವತಂತ್ರ ಪೂರ್ಣವಸ್ತುವನ್ನು ಸರ್ವಜ್ಞ - ಸರ್ವಶಕ್ತ ಇತ್ಯಾದಿ ಗುಣಪೂರ್ಣತೆಯ ರೂಪದಿಂದ ಪರಬ್ರಹ್ಮನೆಂದು ವೇದಗಳು ಬಣ್ಣಿಸಿದ್ದು

ಅರ್ಥಪೂರ್ಣವೆನಿಸುತ್ತದೆ. ಆದರೆ ಆ ಪರಬ್ರಹ್ಮನನ್ನು ಬ್ರಹ್ಮ-ವಿಷ್ಣು ಮೊದಲಾದ ಅನೇಕ ಹೆಸರಿನಿಂದ ವೇದಗಳು ವರ್ಣಿಸಿದಾಗ ವಿವಾದಗಳುಂಟಾಗಿ ಅನೇಕ ಮತಗಳ ಹಾವಳಿ ಹೆಚ್ಚಾಗ ತೊಡಗಿದೆ. ಆ ಪರಬ್ರಹ್ಮವೇ, ಎಲ್ಲ ಮತಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಸಿಕೊಂಡು ಆ ಆ ಮತಗಳಿಗೆ ಆಧಾರಸ್ತಂಭವಾಗಿದೆಯೆಂದು ತಿಳಿದಾಗ, ವಿವಾದವೇ ಇಲ್ಲದಂತೆ ಮತೀಯ ವಾಕ್ಯರ್ಥ ಗಳೆಲ್ಲ "ನಾಮಮಾತ್ರ ಕಲಹವೆ"ಂದಾಗಿ ತಣ್ಣಗಾಗಬಹುದಿತ್ತು. ವಿಷ್ಣು-ಬ್ರಹ್ಮ-ಶಿವ-ಇಂದ್ರ ಸೂರ್ಯ ಇತ್ಯಾದಿ ಹೆಸರೆಲ್ಲ ಆ ಪರಬ್ರಹ್ಮನಿಗೇ ಸಲ್ಲುವಂತೆ ವೇದದ ಮಾತುಗಳನ್ನು ಯೋಜಿಸಿದಾಗ ವಿವಾದವಾದರೂ ಏನಿದೆ? ಹೀಗಿದ್ದೂ ಇಂದಿಗೂ ಈ ಪರಬ್ರಹ್ಮನ ಬಗ್ಗೆ ವಿವಾದಗಳೆಲ್ಲ ಮುಂದೊರೆಯುತ್ತಲೇ ಇದೆಯೆಂದರೆ, ಇದಕ್ಕೇನು ಕಾರಣವೆಂದು ಅನ್ವೇಷಿಸ ಬೇಕಾಗುತ್ತದೆ. ಆಗ ನಿಗೂಢವಾದ ಅನೇಕ ಸಂಗತಿಗಳು ಬಯಲಾಗುತ್ತವೆ.

## ಮತವಿವಾದದ ಹಿನ್ನೆಲೆ

"ಯೋ ದೇವಾನಾಂ ನಾಮಧಾ ಏಕ ಏವ" ಎಂದು ವಿಷ್ಣು - ಬ್ರಹ್ಮ - ಶಿವ ಮೊದಲಾದ ಹೆಸರನ್ನು ಒಬ್ಬನಿಗೇ ನೀಡಿ ನಿರ್ವಿವಾದ ಪರಬ್ರಹ್ಮ ಸ್ವರೂಪವನ್ನು ಗುರುತಿಸಬಹುದಾದರೂ, ಆ ಪರಬ್ರಹ್ಮನಲ್ಲದೆ ಮತ್ತಾರೂ ಈ ಹೆಸರಿಗೆ ಭಾಜನರಾಗಿಲ್ಲವೆಂದಾದಲ್ಲಿ, ಯಾವುದೇ ವಿವಾದ ಉಂಟಾಗುತ್ತಿರಲಿಲ್ಲ. ಇತರ ದೇವತೆಗಳಿಗೂ ಆ ಹೆಸರು ಇರುವುದೆಂದು, ಒಪ್ಪಿದರೂ, ಈ ಹೆಸರಿನವರಾರೂ ಆ ಪರಬ್ರಹ್ಮ ಆಗಿರದೆ ಅದು ಬೇರೆಯದೇ ವಿಲಕ್ಷಣ ಅಸಾಧಾರಣ ಹೆಸರಿನ ದೇವತೆಯೆಂದು ತಿಳಿದಾಗಲೂ ವಿವಾದ ಸಾಧ್ಯವಿರಲಿಲ್ಲ. ಆದರೆ ಪರಿಸ್ಥಿತಿ ತದ್ವಿರುದ್ಧವಾಗಿದೆ. ಬ್ರಹ್ಮ-ವಿಷ್ಣು-ಮಹೇಶ್ವರ ಇತ್ಯಾದಿ ಹೆಸರುಳ್ಳ ಭಿನ್ನ ಭಿನ್ನ ದೇವತೆಗಳು ಪ್ರಮಾಣಸಿದ್ಧರಾಗಿದ್ದಾರೆ. ಇವರಿಂದ ಹೊರತಾದ ಪರಬ್ರಹ್ಮನನ್ನು ಒಪ್ಪಲು ಬಹುಮಟ್ಟಿಗೆ ಯಾವ ಮತಕ್ಕೂ ಇಷ್ಟವಿಲ್ಲ. ಹೀಗಾಗಿ ಸರ್ವೋತ್ತಮ-ಸ್ವತಂತ್ರ ಪರಬ್ರಹ್ಮನಾರೆಂಬ ವಿವಾದ ಸುಲಭವಾಗಿ ಬಗೆಹರಿಯುತ್ತಿಲ್ಲ.

## ನಿರ್ಗುಣಬ್ರಹ್ಮವಾದ ಈ ವಿವಾದಕ್ಕೆ ಪರಿಹಾರವೇ?

ಈ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಕೆಲವರಿಗೆ ತೋಚಿದ್ದು ನಿರ್ಗುಣಬ್ರಹ್ಮವಾದವು. ಬ್ರಹ್ಮ-ವಿಷ್ಣು-ಮಹೇಶ್ವರ ಇವರೆಲ್ಲ ಭಿನ್ನ ಭಿನ್ನರಾಗಿ ಇರುವರೆಂದು ಒಪ್ಪಿದರೂ, ಇವರೆಲ್ಲ ಮೂರು ವೇಷಗಳನ್ನು ಧರಿಸಿದ ಒಬ್ಬನೇ ಪರಬ್ರಹ್ಮನೆಂದು ಒಪ್ಪಿದಾಗ ವಿವಾದ ಬಗೆಹರಿಯಿತೆಂದು ಅವರ ಅನಿಸಿಕೆ. ವೇಷ ಹಾಕಿದಾಗ ಬೇರೆ ಬೇರೆಯಾದವರಾದರೂ ವೇಷ ಕಳಚಿದಾಗ ಒಬ್ಬನೇ ಆಗುವನೆಂದು ಈ ವಾದದ ಅಂತರಾಳವು. ಚಲನಚಿತ್ರದಲ್ಲಿ ಒಬ್ಬನೇ ವ್ಯಕ್ತಿ ಮೂರು ವೇಷಗಳನ್ನು ಧರಿಸಿ, ಒಂದೆಡೆ ಸೋತಂತೆ, ಮತ್ತೊಬ್ಬನಾಗಿ ಗೆದ್ದಂತೆ, ಇನ್ನೊಬ್ಬನಾಗಿ ನಡುವಿರುವಂತೆ, ತೆಗೆದಾಗ ಒಬ್ಬನೇ ಕೊನೆಗೆ ಉಳಿವಂತೆ ಪರಬ್ರಹ್ಮನನ್ನು ತಿಳಿಯಬೇಕೆಂದು ಈ ವಾದ ಹೇಳ ಹೊರಟಿದೆ. ಆದರೆ, ಇದರಿಂದ ವಿವಾದ ಬಗೆಹರಿಯದೆ ಮತ್ತೂ ಜಟಿಲವಾಗುತ್ತದೆ. ಈ ತ್ರಿಮೂರ್ತಿಗಳ

ವೇಷವನ್ನು ತೊರೆದ ಆ ನೈಜ ಪರಬ್ರಹ್ಮನಿಗೆ ಈ ಮೂವರಲ್ಲಿ ಯಾರ ಗುಣ ಸೇರಿಕೊಂಡಿದೆ? ಎಂದು ವಿಚಾರ ಮಾಡಿದಾಗ. ಆ ಗುಣಕ್ಕೆ ತಕ್ಕಂತೆ ಬ್ರಹ್ಮನೋ-ವಿಷ್ಣುವೋ ಯಾರೋ ಒಬ್ಬನೇ ಈ ಪರಬ್ರಹ್ಮನಾಗಬೇಕಾಗುತ್ತದೆಯಷ್ಟೆ ಅದಕ್ಕೆ ವಿಲಕ್ಷಣವಾಗಿ ಗುಣಮಂಡಿತರಾದ ಉಳಿದಿಬ್ಬರು ಅವನೇ ಎಂದು ಸಮನ್ವಯಿಸಲು ಸಾಧ್ಯವಿಲ್ಲವಷ್ಟೆ

ಅದಕ್ಕಾಗಿ ಆ ಪರಬ್ರಹ್ಮನಿಗೆ ಯಾವ ಗುಣವೂ ಇಲ್ಲವೆಂದು ವಾದಿಸಿ ವಿವಾದ ಬಗೆಹರಿಸಬೇಕೆಂದರೆ, ಆಗ ಮೂಲ ಪ್ರಶ್ನೆಯೇ ದೊಡ್ಡದಾಗುತ್ತದೆ. ಜೀವನು ತಾ ಅನುಭವಿಸುವ ಪರತಂತ್ರತೆಯ ಹಿಂದೆ ನಿಯಂತ್ರಿಸುವ ಪರದೇವತೆಯನ್ನು ಗುರುತಿಸಲು ಹೊರಟು ವೇದಾವಲಂಬಿಯಾಗಿ, ಕಡೆಗೆ ಆ ಪರಬ್ರಹ್ಮನು ತನ್ನಲ್ಲಿರುವ ಒಂದೆರಡು ಗುಣಗಳಿಂದಲೂ ಹೀನವಾದ ನೀಚವಸ್ತುವೆಂದು ವಿಚಾರವುಂಟಾದರೆ, ಅವನ ಅಧೀನತೆಯಿಂದ ತನ್ನ ಈ ಪಾರತಂತ್ರ್ಯವನ್ನು ಅರ್ಥಮಾಡಿಕೊಳ್ಳುವುದು ಮೂರ್ಖತನವಾಗುವುದಷ್ಟೆ ಇದಕ್ಕೆ ಉತ್ತರ ವೆಂಬಂತೆ, ತನ್ನ ಒಂದೆರಡು ಗುಣಗಳು ಮತ್ತು ಸಮಸ್ತ ಈ ಜಗತ್ತು, ಹಾಗೂ ತ್ರಿಮೂರ್ತಿಗಳ ವಿಭಿನ್ನ ಗುಣಗಳ ಲೀಲೆ ಇವೆಲ್ಲವೂ ವ್ಯಾವಹಾರಿಕವಾಗಿ ಇರುವುದೆಂದು, ನಿಜವಾಗಿ ಯಾವುದೂ ಇರದೆ, ನಿರ್ಗುಣ ನಿರಾಕಾರ ಬ್ರಹ್ಮವೊಂದೇ ಇರುವುದೆಂದು ಸಾಧಿಸ ಹೊರಟರೆ, ವಿವೇಕಿಯಾದ ಜೀವನು ತನ್ನ ಅನುಭವಕ್ಕೆ ವಿರುದ್ಧವಾದ ಈ ವಾದಕ್ಕೆ ಕಿಂಚಿತ್ತೂ ಬೆಲೆ ನೀಡದೆ, "ಎಲ್ಲರೂ ಮೂರ್ಖ"ರೆಂದು ಕೂಗುತ್ತ ಮತ್ತೊಬ್ಬರನ್ನು ಮೂರ್ಖರೆಂದು ಸಮರ್ಥಿಸಲು, ತನ್ನನ್ನೂ ಮೂರ್ಖನೆಂದು ಒಪ್ಪುವ ಹುಚ್ಚುವಾದಿಯ ಮಾತಿನಂತೆ ಈ ನಿರ್ಗುಣ ಬ್ರಹ್ಮವಾದವನ್ನು ನೋಡಿ ಅಪಹಾಸಮಾಡುತ್ತಾನಷ್ಟೆ ಆದ್ದರಿಂದ ನಿರ್ಗುಣ ಬ್ರಹ್ಮವಾದದ ಸರ್ವೋತ್ತಮ ವಸ್ತುವಿನ ಬಗ್ಗೆ ಉಂಟಾದ ವಿವಾದ ಬಗೆಹರಿಯಲಾರದು.

## ತುರೀಯ ಶಿವವಾದ

ಬ್ರಹ್ಮ-ವಿಷ್ಣು-ಮಹೇಶ್ವರ ಈ ತ್ರಿಮೂರ್ತಿಗಳಿಂದ ಹೊರತಾದ ಪರಶಿವನೆಂಬ ಪರಬ್ರಹ್ಮ ವಸ್ತುವನ್ನು ಒಪ್ಪಿ ಈ ವಿವಾದ ಬಗೆ ಹರಿಸಲು ಹೊರಟಿರುವ ವಾದವೇ ಈ ತುರೀಯ ಶಿವವಾದ. ಈ ವಾದದಿಂದ ವಿವಾದ ಬಗೆಹರಿದಂತೆ ಮೇಲುನೋಟಕ್ಕೆ ಹೌದೆನಿಸಿದರೂ, ಈ ತುರೀಯ ಶಿವನ ವಿಷಯಕ್ಕೆ ಆಧಾರವೇನೆಂಬ ಮೂಲಭೂತ ಪ್ರಶ್ನೆ ಬಲಿಷ್ಠವಾಗಿದೆ. ಇದಕ್ಕೆ ಈ ವಾದದಲ್ಲಿ ಸಮರ್ಪಕ ಉತ್ತರವಿಲ್ಲ, ಇದಲ್ಲದೆ, ಪರವಸ್ತುವಿನ ಗುಣವಂತಿಕೆಯಿಂದ ವೇದಗಳಲ್ಲಿ ಪ್ರತಿಪಾದ್ಯರಾದ ಬ್ರಹ್ಮ-ವಿಷ್ಣು-ರುದ್ರ ಇವರ ಸಾಲಿನಲ್ಲಿ ತುರೀಯಶಿವ ಎಂಬ ನಾಲ್ಕನೆಯ ದೇವತೆಯ ಸೇರ್ಪಡೆ ಸಮಸ್ಯೆಯನ್ನು ಇನ್ನೂ ಜಟಿಲಗೊಳಿಸಲಷ್ಟೇ ದಿಟವಾಗಿದೆ. ಈ ಮೂರರಲ್ಲೇ ಒಬ್ಬರಿಗೆ ಈ ಸಕಲದೇವತಾನಾಮಸಮನ್ವಯದಿಂದ ಬಗೆಹರಿಯುವ ಸಮಸ್ಯೆಗೆ ಇಲ್ಲದ ನಾಲ್ಕನೆಯ ವ್ಯಕ್ತಿಯನ್ನು ಹುಟ್ಟಿಸಿ ಅವನಿಗೆ ಪಟ್ಟ ಕಟ್ಟಿ ಅವನ ಕಾಲಿಗೆ ಬೀಳುವ ಈ ವಿಚಾರ ಕೊಂಕಣ ಸುತ್ತಿ ಮೈಲಾರಕ್ಕೆ ಬಂದಂತೆ ಆಗಲಾದೀತೆ? ಆದ್ದರಿಂದ ಲೋಕಪ್ರಸಿದ್ಧ ತ್ರಿಮೂರ್ತಿಗಳಲ್ಲೇ ಒಬ್ಬ ದೇವತೆ ಈ ಪರಬ್ರಹ್ಮನೆಂಬ ಹೆಗ್ಗಳಿಕೆ ಗಳಿಸುವುದೇ ಉಚಿತ.

## ಯಾರು ಹಿತವರು ಈ ಮೂವರೊಳಗೆ?

ಬ್ರಹ್ಮ-ವಿಷ್ಣು-ಮಹೇಶ್ವರ ಈ ಮೂವರಲ್ಲಿ ಯಾರು ಆ ಪರವಸ್ತುವೆಂದು ವಿಮರ್ಶಿಸ ಹೊರಟರೆ, ಇಂದಿನ ಕಾಲದಲ್ಲಿ ಚತುರ್ಮುಖ ಬ್ರಹ್ಮನ ಸರ್ವೋತ್ತಮತ್ವವನ್ನು ಆಗ್ರಹಿಸುವ ಹೈರಣ್ಯ ಗರ್ಭವಾದದಲ್ಲಿ ಹೆಚ್ಚಿನ ಪ್ರಚಾರವಿಲ್ಲವಾದ್ದರಿಂದ ಶೈವ-ವೈಷ್ಣವ ಮತಗಳ ಸಂಘರ್ಷವೇ ಎದುರಾಗುತ್ತದೆ. ಎಲ್ಲರೂ ತಮ್ಮ ತಮ್ಮ ಮತಗಳಿಗೆ ಪುರಾಣಾದಿ ಪ್ರಮಾಣಗಳನ್ನು ಪುಂಖಾನುಪುಂಖವಾಗಿ ಕೂಗುವರೇ ಆಗಿದ್ದಾರೆ. ವೇದವ್ಯಾಸದೇವರು ವಿರಚಿಸಿದ 18 ಪುರಾಣಗಳಲ್ಲಿ ಎರಡೂ ಮತಗಳಿಗೆ ಸಾಧಕ ಬಾಧಕಗಳಾದ ಶ್ಲೋಕಗಳು ಹೇರಳವಾಗಿವೆ. ಶಿವನ ಪಾರಮ್ಯ ಬೋಧಕ ವಾಕ್ಯಗಳನ್ನು ವೈಷ್ಣವರು ಮೋಹಕವೆಂದರೆ, ಶೈವರು ವಿಷ್ಣುಪಾರಮ್ಯ ಬೋಧಕವಾಕ್ಯಗಳನ್ನು ಹಾಗೆ ತಿರುಗಿಸುತ್ತಾರೆ. ಆದ್ದರಿಂದ ಈ ವಿವಾದ ಬಗೆಹರಿಯಲು ಇಬ್ಬರೂ ಒಪ್ಪುವ ಒಂದು ಸೂತ್ರವನ್ನು ಗುರುತಿಸಬೇಕಾಗಿದೆ. ವೇದ-ವೇದಾಂತಾನುಸಾರಿತ್ವವೊಂದೇ ಆ ಸೂತ್ರವಾಗಬಲ್ಲದು. ಈ ಹಿನ್ನೆಲೆಯಿಂದ ವಿಚಾರ ಮಾಡಲು ಹೊರಟಾಗ, ವೈಷ್ಣವ ಮತ ಪ್ರವರ್ತಕರಾದ ಶ್ರೀಮದಾಚಾರ್ಯರು ನಿರೂಪಿಸುವ ರೀತಿ ಹೃದಯಂಗಮವಾಗಿದೆ.

## ಸರ್ವನಾಮವಾರಿಗೆ ?

ಸರ್ವೋತ್ತಮ ವಸ್ತುವನ್ನು ನಿರ್ಧರಿಸಲು ಸರ್ವನಾಮಗಳು ಯಾರಿಗುಂಟೆಂದು ವಿಮರ್ಶಿಸಬೇಕೆಂಬುದು ಶ್ರೀಮದಾಚಾರ್ಯರ ಹಾರ್ದವಾಗಿದೆ. "ಯೋ ದೇವಾನಾಂ ನಾಮಧಾ ಏಕ ಏವ" ಎಂಬ ಋಗ್ವೇದದ ಮಂತ್ರದಲ್ಲಿ ದೇವತೆಗಳ ಎಲ್ಲ ನಾಮವನ್ನು ಒಬ್ಬನೇ ಧರಿಸುವ ಸಂಗತಿ ಇದೆಯಷ್ಟೆ ಈ ಸರ್ವನಾಮಧರನಾದ ಪುರುಷನಾರು? ಎಂದು ಇದರ ಪೂರ್ವಾಪರಗಳಲ್ಲಿ ಹುಡುಕಿದಾಗ ಅಲ್ಲಿ ಬಂದಿರುವ ಒಂದು ಲಕ್ಷಣ ವಿಷ್ಣುವಿಗೆ ಹೊಂದುತ್ತಿದೆ. "ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾಭುವನಾನಿ ತಸ್ಥುಃ" ಎಂಬ ಮುಂದಿನ ಈ ವಾಕ್ಯದಲ್ಲಿ ಜಗದಾಧಾರವಾದ ಒಂದು ಪದ್ಮ ಅವನ ನಾಭಿಯಲ್ಲಿ ಇದೆಯೆಂಬ ವಿಷ್ಣುಲಕ್ಷಣ ಸ್ಪಷ್ಟವಾಗಿದೆ. ಇದರಿಂದ ಸರ್ವನಾಮವಾಚ್ಯನು ವಿಷ್ಣುವೇ ಆಗುವನೆಂದು ನಿಶ್ಚಯವಾಗಿ, ವಿಷ್ಣುವೇ ಸರ್ವದೇವೋತ್ತಮನೆಂದು ನಿರ್ಧರಿಸಬಹುದು. ರುದ್ರಾದಿಗಳಿಗೆ ಉತ್ಕರ್ಷವನ್ನು ಹೇಳುವ ವಾಕ್ಯಗಳಲ್ಲಿ ರುದ್ರಾದಿ ನಾಮಗಳಿಂದ ಈ ಸರ್ವನಾಮಧರ ವಿಷ್ಣುವೇ ವಾಚ್ಯನೆಂದಾದಾಗ ವಿಷ್ಣು ಸರ್ವೋತ್ತಮತ್ವವು ವಿವಾದಾತೀತವಾಗುತ್ತದೆಯಷ್ಟೆ ವಿಷ್ಣುವಿನಂತೆ ರುದ್ರಾದಿಗಳಿಗೂ ಸರ್ವ ನಾಮವಿದೆಯೆಂದು ಪ್ರಮಾಣವಿದ್ದಿದ್ದರೆ ಈ ವಿವಾದ ಮತ್ತೆ ಬಾಯಿ ತೆರೆಯುತ್ತಿತ್ತು. ಆದರೆ ಹಾಗೆ ಯಾವ ಪ್ರಮಾಣವೂ ಇರುವುದಿಲ್ಲ. 'ದೇವಾನಾಂ ನಾಮಧಾ ಏಕ ಏವ' ಎಂಬ ಶ್ರುತಿಯ 'ಏವ' ಕಾರ ಅದಕ್ಕೆ ಬಾಧಕವೂ ಆಗಿರುತ್ತದೆಯಷ್ಟೆ

## ಬಲಾಬಲವಿಚಾರ

ಇದರಂತೆ ಶ್ರುತಿವಾಕ್ಯಗಳಲ್ಲಿ ಬಲಾಬಲವನ್ನು ಕಂಡಾಗಲೂ ಸಹ ವಿಷ್ಣು ಸರ್ವೋತ್ತಮತ್ವವೇ ದಿಟವಾಗುತ್ತದೆ. "ನಾರಾಯಣೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ" ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮ-ರುದ್ರರನ್ನು ಕಂಠತಃ ಗ್ರಹಿಸಿ ನಿಷೇಧಿಸುತ್ತ ನಾರಾಯಣನ ಪಾರಮ್ಯ ಹೇಳಿದಂತೆ, ಶಿವಾದಿಗಳನ್ನು ವರ್ಣಿಸುವ ಶ್ರುತಿ ಇರುವುದಿಲ್ಲ. "ಏಕೋ ರುದ್ರೋ ನ ದ್ವಿತೀಯೋಽವತಸ್ಥೇ" ಇತ್ಯಾದಿ ವಾಕ್ಯಗಳು ಇತರ ನಿಷೇಧಪೂರ್ವಕವಾಗಿ ಶಿವಪಾರಮ್ಯವನ್ನು ಹೇಳಿದರೂ ಸಹ, ಕಂಠತಃ ವಿಷ್ಣುನಿಷೇಧವಿಲ್ಲ. ಕಂಠತಃ ಇತರವ್ಯಕ್ತಿಗಳನ್ನು ಪ್ರತ್ಯೇಕವಾಗಿ ಗ್ರಹಿಸಿ ಅವರನ್ನು ನಿಷೇಧಿಸುವ ವಾಕ್ಯದಂತೆ ಸಾಮಾನ್ಯತಃ ಇತರ ನಿಷೇಧಕವಾಕ್ಯಗಳು ಪ್ರಬಲವಾಗದಷ್ಟೆ ಆದ್ದರಿಂದ ಈ ರೀತಿಯ ವಾಕ್ಯಗಳಲ್ಲಿ ರುದ್ರಾದಿಶಬ್ದಗಳು ವಿಷ್ಣುಪರವೆಂದು "ಯೋ ದೇವಾನಾಂ ನಾಮಧಾ" ಎಂಬ ಶ್ರುತ್ಯನುಸಾರವಾಗಿ ಯೋಜಿಸಿದಾಗ ವಿಷ್ಣುಸರ್ವೋತ್ತಮತ್ವವು ಮತ್ತೂ ದೃಢವಾಗುತ್ತದೆ.

## ಪುರಾಣಗಳ ಬಲಾಬಲ

ಈ ರೀತಿಯಾಗಿ ಶ್ರುತಿಸಿದ್ಧವಾದ ವಿಷಯಕ್ಕೆ ಪೋಷಕವಾದ ಪುರಾಣಗಳು ಪ್ರಮಾಣಗಳೆನಿಸಿ ಶ್ರುತ್ಯರ್ಥವನ್ನು ಸ್ಫುಟಪಡಿಸಲು ಸಹಕಾರಿಯಾಗುತ್ತವೆಯೆಂದು ಪ್ರಾಚೀನರೆಲ್ಲ ಪುರಾಣಗಳಿಗೆ ಬೆಲೆ ನೀಡಿದ್ದಾರೆ. ವಿರುದ್ಧವಾಗಿ ತೋರುವಂತಾದರೆ ಆ ಪುರಾಣವಾಕ್ಯಗಳನ್ನು ಮೋಹಕವೆಂದೂ ಕಲ್ಪಿತವೆಂದೋ ನಿಶ್ಚಯಿಸಿ ವಿವಾದಗಳನ್ನು ಕೊನೆಗಾಣಿಸಬೇಕಷ್ಟೆ. ಆದ್ದರಿಂದ ಯಾರೋ ಬರೆದಿರುವ ಪುಸ್ತಕದಲ್ಲಿ ಹೇರಳವಾಗಿ ಪುರಾಣವಾಕ್ಯಗಳು ಇದ್ದಮಾತ್ರಕ್ಕೆ ಅದನ್ನು ತಮಗುಪಯುಕ್ತವಾಗುವಂತೆ ಬಳಸುವಂತಿಲ್ಲ. ಶ್ರುತ್ಯವಿರೋಧ – ಶ್ರುತ್ಯನುಸಾರಿತ್ವಗಳ ಹಿನ್ನೆಲೆ ಯಲ್ಲಿ ಉಪಲಬ್ಧ ಪುರಾಣಗಳನ್ನು ವಿಶ್ಲೇಷಿಸಿದಾಗ ವಿಷ್ಣುಪಾರಮ್ಯ ಬೋಧಕ ಭಾಗವತಾದಿ ಪುರಾಣಗಳಿಗಿರುವ ಬೆಲೆ ಇತರ ಪುರಾಣಗಳಿಗೆ ಬರಲಾರದು. ಆದ್ದರಿಂದ ಪುರಾಣಗಳಲ್ಲಿಯೂ ಪರಸ್ಪರ ವಿರೋಧವಾದಾಗ ವೈಷ್ಣವ ಪುರಾಣಕ್ಕೆ ಪ್ರಾಬಲ್ಯವನ್ನು ಗಮನಿಸಿ ಅರ್ಥನಿರ್ಣಯವನ್ನು ಮಾಡಬೇಕಾಗುತ್ತದೆ.

## ಸುಲಭೋಪಾಯ-ಭಗವದ್ಗೀತೆ

ಈ ಮತೀಯ ವಿವಾದ ಬಗೆ ಹರಿಸಲು, ದುರ್ಗಮವಾದ ಶ್ರುತಿಗಳ ವಿಚಾರ ಹಾಗೂ ಶ್ರುತಿ ಬಲಾಬಲವಿಚಾರ ಮತ್ತು ಶ್ರುತ್ಯನುಸಾರಿ ಪುರಾಣಗಳ ಪ್ರಾಬಲ್ಯವಿಚಾರ ಇವುಗಳಿಗಿಂತ, ಸರ್ವಸಮ್ಮತವಾದ ಭಗವದ್ಗೀತೆಯನ್ನೊಂದನ್ನು ವಿಮರ್ಶಿಸಿದರೂ ಸಾಕು ವಿಷ್ಣುಸರ್ವೋತ್ತಮತ್ವ ನಿರ್ವಿವಾದವಾಗಿ ತಿಳಿಯುತ್ತದೆ.

"ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ"

"ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ"

ಇತ್ಯಾದಿ ಗೀತಾವಾಕ್ಯಗಳು ವಿಷ್ಣುಸರ್ವೋತ್ತಮತ್ವವನ್ನು ಬಾಯಿ ತೆರೆದು ತಿಳಿಸುತ್ತಿವೆ. ಹೀಗೆ ಶ್ರುತಿ-ಸೂತ್ರ-ಗೀತಾ ಪ್ರಸ್ಥಾನತ್ರಯಗಳು ಹಾಗೂ ತದನುಸಾರಿ ಪುರಾಣಾದಿಗಳಿಂದ ಪರಬ್ರಹ್ಮನನ್ನು ಸರಿಯಾಗಿ ಅರ್ಥಮಾಡಿಕೊಂಡು ಅವನ ಅನುಗ್ರಹ ಗಳಿಸಿ, ಅವನ ಅಧೀನವಾದ ಈ ವಿವಿಧ ಸಾಂಸಾರಿಕ ಕ್ಲೇಶಗಳಿಂದ ಮುಕ್ತರಾಗಿ ಪರಮಸುಖಭಾಗಿಯಾಗಬೇಕೆಂಬುದೇ ಈ ಮಾನವ ತನುವಿನಲ್ಲಿ ಶ್ರಮವಹಿಸಿ ಗಳಿಸಬೇಕಾದ ದಿವ್ಯಜ್ಞಾನ ಭಂಡಾರವು. ಇದೇ ಜೀವನದ ಪರಮಗುರಿ. ಶ್ರೀಮದಾಚಾರ್ಯರು ತೋರಿದ ಮುಕುತಿಯ ದಾರಿ.

## ಪೂರ್ವೋತ್ತರ ವಿಚಾರ

ಕಂಡ ಕಂಡ ದಾರಿಯಲ್ಲಿ ಅಲೆದಾಡಿದ ಮಾತ್ರಕ್ಕೆ ಈ ಗುರಿ ಸಿಗಲಾರದು. ಯಾವ ಮತಾಚಾರ್ಯರೂ ಸಹ ಹೀಗೆ ಮನಮುಟ್ಟುವಂತೆ, ಅನುಭವಕ್ಕೆ ಒಪ್ಪುವಂತೆ ದಾರಿ ತೋರಿಲ್ಲ. "ನಾ ಹೇಳಿದ್ದೇನೆ. ನೀನು ಒಪ್ಪಬೇಕು" ಎಂಬ ಪಾಷಂಢತನದ ಹೊಂಡದಲ್ಲಿ ಅವರ ವಿಚಾರಗಳೆಲ್ಲ ಹೂತು ಹೋಗಿವೆ. ಕಾಣುವ ಅನುಭವಿಸುವ ಜಗವೆಲ್ಲವನ್ನು ನಿಜವಲ್ಲವೆಂದು ಅನುಭವಕ್ಕೆ ತರಿಸಲು ಆಗ್ರಹಿಸುವ ಅದ್ವೈತಮತವಂತೂ, ನಮ್ಮನ್ನು ನಾವೇ ವಂಚಿಸಿಕೊಳ್ಳಲು ಪ್ರೇರೇಪಿಸುವ ಪರಿಯಾಗಿ ಹೇಸಿಗೆ ಹುಟ್ಟಿಸುವುದಷ್ಟೆ. ಈ ಹಿನ್ನೆಲೆಯಲ್ಲಿ ಒಮ್ಮೆ ಹಿನ್ನೋಟ ಮಾಡಿದಾಗ, ಶ್ರೀ ಮದಾಚಾರ್ಯರ ಮಾರ್ಗದರ್ಶನ ವಿರದಿದ್ದಲ್ಲಿ, ನಮಗಿಂದು ಒದಗಬಹುದಾದ ದುಸ್ಥಿತಿಯ ಆಳವೆಷ್ಟೆಂದು ಊಹಿಸಲೂ ಸಾಧ್ಯವಾಗದು. ಮರಳುಗಾಡಿನ ಬಿಸಿಯುಂಡವನಿಗೆ ಮಾತ್ರ ಮಲೆನಾಡಿನ ಸೊಗಸಿನ ಬೆಲೆ ಅರ್ಥವಾದೀತು. ಈ ವಿಚಾರ ಸರಿಯಾಗಿ ನಮ್ಮ ಅನುಭವಕ್ಕೆ ಬರಬೇಕಾದರೆ, ಎರಡು ಸಂಗತಿಗಳನ್ನು ನಾವು ಸದಾ ಮೆಲಕುಹಾಕಬೇಕಾಗಿದೆ. ಒಂದು ಶ್ರೀಮದಾಚಾರ್ಯರು ಅವತರಿಸುವುದಕ್ಕೆ ಹಿಂದೆ ಏನಿತ್ತು? ಎರಡು ಮುಂದೇನಾಯಿತು? ಈ ಪೂರ್ವಾಪರ ವಿಚಾರವೇ ಎಲ್ಲ ಕ್ಷೇತ್ರಗಳ ಅಭಿವೃದ್ಧಿ ಪಥದ ಹೆಬ್ಬಾಗಿಲಷ್ಟೆ. ಈ ಹಿನ್ನೆಲೆಯಿಂದ ಸಾಧಕನ ಸಾಧನೆಗೆ ಉಪಯುಕ್ತವಾಗಲೆಂದು ಜನ್ಮತಾಳಿದ ಎರಡು ಅಮೌಲ್ಯ ಕೃತಿಗಳೇ ಮಣಿಮಂಜರೀ - ಸುಮಧ್ವವಿಜಯ. ಶ್ರೀನಾರಾಯಣ ಪಂಡಿತಾಚಾರ್ಯರ ಮುಂದಿನ ಜನಾಂಗಕ್ಕೆ ಕರುಣಿಸಿದ ಪೂರ್ವೋತ್ತರ ಕಾಲದಲ್ಲಿ ನಡೆದ ಘಟನೆಗಳ ಅಪೂರ್ವ ವಿಷಯ.

## ಮಣಿಮಂಜರಿಯ ಮಹತ್ವ

ಸುಮಧ್ವವಿಜಯವು ಆಚಾರ್ಯರ ಅವತಾರಾನಂತರದ ವಿಚಾರವನ್ನು ಪ್ರಧಾನವಾಗಿ ತಿಳಿಸುವ ಕೃತಿಯಾಗಿದ್ದರೆ, ಮಣಿಮಂಜರಿ ಅವತಾರಪೂರ್ವಕಾಲದ ಸಂಗತಿಯ ಬಗ್ಗೆ ಬೆಳಕು

ಚೆಲ್ಲುತ್ತಿದೆ. ಆಚಾರ್ಯರ ಅವತಾರಕ್ಕೆ ಪೂರ್ವದಲ್ಲಿ ಬಂದಿರುವ ಅನೇಕಮತಾಚಾರ್ಯರಲ್ಲಿ ಅದ್ವೈತ ಮತಸ್ಥಾಪಕರಾದ ಶಂಕರಾಚಾರ್ಯರ ವಿಚಾರ ಇಲ್ಲಿ ಸುದೀರ್ಘವಾಗಿ ಪ್ರಸ್ತುತವಾಗಿದೆ. 8 ಸರ್ಗದ ಈ ಕೃತಿಯಲ್ಲಿ 6-7ನೇ ಸರ್ಗಗಳು ಇದಕ್ಕೇ ಮೀಸಲಾಗಿವೆ. ಈ ಸರ್ಗಗಳಲ್ಲಿ ಬಂದ ಶಂಕರಾಚಾರ್ಯರ ಕಥಾಭಾಗವು ಕೆಲವು ಶಂಕರ ಅನುಯಾಯಿಗಳಿಗೆ ಪರಿತಾಪ ನೀಡುತ್ತಿದ್ದರೆ, ಕೆಲವು ಮಾಧ್ವ ಮತೀಯರಿಗೆ ಪರಮಾನಂದ ಉಕ್ಕೇರಿಸುತ್ತಿದೆ. ಆದರೆ ಅವರ ಪರಿತಾಪ-ಇವರ ಪರಮಾನಂದ, ಇವೆರಡೂ ಸಹ ದುರಾಗ್ರಹದ ಪರಿಣಾಮ ಮಾತ್ರವಾಗಿದೆ. ಮಣಿಮಂಜರಿಯ ಫಲವಾದುದಲ್ಲ. ಆಗ್ರಹ ತೊರೆದು ವಿಮರ್ಶಿಸಿದಾಗ, ಇದು ತಿರುವು-ಮುರವಾಗಬಹುದು. ಶ್ರೀಮದಾಚಾರ್ಯರ ಚರಿತ್ರೆಗೆ, ಆಚಾರ್ಯರ ಕಾಲದಲ್ಲೇ ಇದ್ದಂಥಹ, ಐತಿಹಾಸಿಕ ದೃಷ್ಟಿ ಹೊಂದಿದ ಪಂಡಿತಾಚಾರ್ಯರ ಸುಮಧ್ವವಿಜಯದಂತೆ ಶಂಕರಾಚಾರ್ಯರ ಬಗ್ಗೆ ಶಾಂಕರವಿರಚಿತವಾದ ಒಂದೂ ಅಧಿಕೃತಗ್ರಂಥವಿಲ್ಲವಾದಾಗ ಮಣಿಮಂಜರಿಯ ಈ ವಿಚಾರಕ್ಕೆ ಶಂಕರಾನುಯಾಯಿಗಳು ಏಕೆ ತಲೆಕೆಡಿಸಿಕೊಳ್ಳಬೇಕು? ಇದರಂತೆ, ಮಾಧ್ವರೂ ಸಹ ರಾವಣ-ದುರ್ಯೋಧನಾದಿ ದೈತ್ಯರ ಕಥಾಭಾಗವನ್ನು ರಾಮಾಯಣ-ಭಾರತಾದಿಗಳಲ್ಲಿ ಕೇಳಿದಾಗ ಆನಂದಿಸದೇ ಇರುವಾಗ, ಇಲ್ಲಿ ಮಾತ್ರ ಆನಂದಪಡಲು ಕಾರಣವಾದರೂ ಯಾವುದಿದೆ? ಆದ್ದರಿಂದ ಮಣಿಮಂಜರಿಯನ್ನು ಕೆಲವು ಜನಗಳ ಪರಿತಾಪ-ಪರಮಾನಂದಗಳ ಚೌಕಟ್ಟಿನಲ್ಲಿ ನೋಡುತ್ತ, ಮತೀಯ ದ್ವೇಷಾಸೂಯದ ಆವಿಷ್ಕಾರವಾಗಿ ಆಧುನಿಕ ಬುದ್ಧಿಜೀವಿಗಳು ವಿಮರ್ಶಿಸುವ ರೀತಿ ಮೌಢ್ಯತೆಯ ಪರಮಾವಧಿಯು.

ಆಗ್ರಹ ತೊರೆದು ನೋಡಿದರೆ ಮಣಿಮಂಜರಿಯ ಮಹತ್ತ್ವ ಮಹತ್ತರವಾಗಿ ತೋರುತ್ತದೆ. ''ಶ್ರೀಮಧ್ವೋ ವಿಜಯೀ ಚ ಮಧ್ವವಿಜಯಃ ನಾರಾಯಣಪ್ರೋದ್ಭವಃ'' ಎಂಬ ಅಂತಿಮ ನುಡಿಯನ್ನು ಗಮನಿಸಿದಾಗ ನಾರಾಯಣಪಂಡಿತಾಚಾರ್ಯರು ಸುಮಧ್ವವಿಜಯವನ್ನು ಬರೆದ ನಂತರವೇ ಮಣಿಮಂಜರಿಯನ್ನು ಬರೆದರೆಂದು ನಿಶ್ಚಯಿಸಬಹುದು. ಸುಮಧ್ವ ವಿಜಯವನ್ನು ಅವರು ಓರ್ವ ಕವಿಯಾಗಿ ಮಾತ್ರ ವಿರಚಿಸದೆ, ಐತಿಹಾಸಿಕ ಪ್ರಜ್ಞೆಯಿಂದ ನಿರೂಪಿಸಿರುವ ಸಂಗತಿಯನ್ನೂ ಅವರೇ ಬರೆದ ಮಧ್ವವಿಜಯದ ಟಿಪ್ಪಣಿಯಾದ ಭಾವಪ್ರಕಾಶಿಕೆಯಿಂದ ಗುರುತಿಸಬಹುದು.

''ಪ್ರಾಯೇಣ ನೈಕಮಾತ್ರೋಕ್ತಾಃ ಕಥಿತಾ ಇಹ ಸರ್ವಶಃ।
ಮಾಯಾ ದೃಷ್ಟಾ ಧ್ರುವಮಿತಿ ಪ್ರೋಕ್ತಾಃ ಪ್ರಾಯೇಣ ಪೂರುಷೈಃ॥
ದ್ವಯೋರ್ವಕ್ತ್ರೋರ್ವಿರೋಧೇಽತ್ರ ಸ್ವೀಕೃತಾ ಪ್ರಬಲಸ್ಯ ಗೀಃ।
ತುಲ್ಯಂ ತತ್ ಸೂಕ್ಷ್ಮದೃಷ್ಟ್ಯಾದೌ ದೈವೇ ನೈವ ಪರೀಕ್ಷ್ಯತೇ॥

ಕಾವ್ಯಶ್ರಿಯೇ ವಾ ಗುರುಕೀರ್ತಯೇವಾ ಪ್ರೋಕ್ತಂ ಸ್ವಯೈವಾಪಿ ಮನೀಷಯೇತಿ॥
ತಸ್ಮಾನ್ನ ಶಂಕ್ಯೇತ ಮಹಾಜನೇನ ಪುಂಸಾ ಕುಶಾಗ್ರೀಯಧಿಯಾಽಪ್ಯವಶ್ಯಮ್॥''

(ಭಾವಪ್ರಕಾಶಿಕಾ)

(ಇಲ್ಲಿ ಹೇಳಿದ್ದೆಲ್ಲವೂ ಪ್ರಾಯಃ ಒಬ್ಬರೇ ಹೇಳಿದ ವಿಷಯವಾಗಿಲ್ಲ. 'ಸತ್ಯವಾಗಿ ನಾ ಕಂಡೆನೆಂದು' ಜನರು ಹೇಳಿದ್ದನ್ನೇ ಹೇಳಲಾಗಿದೆ. ಹೇಳುವಾಗ ಇಬ್ಬರ ನಡುವೆ ವಿರೋಧ ತೋರಿದಾಗ ಈರ್ವರಲ್ಲಿ ಹೆಚ್ಚು ವಿಶ್ವಾಸಕ್ಕೆ ಅರ್ಹನಾಗುವನ ಮಾತನ್ನು ಒಪ್ಪಲಾಗಿದೆ. ಸೂಕ್ಷ್ಮದೃಷ್ಟಿಯ ವಿಷಯದಲ್ಲಿಯೂ ಸಹ ಇದೇ ನ್ಯಾಯ ಸಮಾನವಾಗಿದೆ. ಆದರೆ ದೈವೀಕ ಘಟನೆಗಳ ವಿಷಯದಲ್ಲಿ ಈ ಪರೀಕ್ಷೆ ಸಾಧ್ಯವಿಲ್ಲ. ಆದ್ದರಿಂದ, "ಕಾವ್ಯದ ಸೊಬಗು ಗಳಿಸಲೆಂದಾಗಲಿ, ಗುರುಗಳ ಕೀರ್ತಿ ಹೆಚ್ಚಿಸುವುದಕ್ಕಾಗಲಿ, ತನ್ನದೇ ಬುದ್ಧಿವಂತಿಕೆಯಿಂದ ಹೇಳಿದ ವಿಷಯ"ವೆಂದು, ಕುಶಾಗ್ರಮತಿಗಳಾದ ಉನ್ನತ ವ್ಯಕ್ತಿತ್ವದ ಬುದ್ಧಿಜೀವಿಗಳು ಕಿಂಚಿತ್ತೂ ಶಂಕೆ ಮಾಡದಿರಲಿ.)

ಈ ಹಿನ್ನೆಲೆಯಿಂದ ಮಣಿಮಂಜರಿಯನ್ನು ರಚಿಸುವ ಪೂರ್ವದಲ್ಲಿ ನಾರಾಯಣ ಪಂಡಿತಾಚಾರ್ಯರ ಮನಸ್ಥಿತಿಯನ್ನು ಗಮನಿಸಿದಾಗ, ಈ ಕೃತಿ ದ್ವೇಷಾಸೂಯದ ಆವಿಷ್ಕಾರಕ್ಕಾಗಿಯೇ ಹೊರಬಂದಿದೆಯೆಂಬ ಆಕ್ಷೇಪ ಅರ್ಥಹೀನವಾಗುತ್ತದೆಯಷ್ಟೆ. ಇದಲ್ಲದೆ, ಶ್ರೀಮದಾಚಾರ್ಯರ ಪೂರ್ವಕಾಲೀನ ಚಾರಿತ್ರಿಕ ಘಟನೆಗಳ ಅಧ್ಯಯನಕ್ಕೆ ಇದೊಂದು ಅಪೂರ್ವ ಸಲಕರಣೆಯೆಂದು ತಿಳಿಯುವುದು, ಅಧ್ಯಯನಶೀಲ ಸಮಾಜದ ಕರ್ತವ್ಯವೆಂದೇ ಆಗುವುದಷ್ಟೆ.

ಹಾಗಾದರೆ, ಲೋಕವಿಖ್ಯಾತ ಮತಾಚಾರ್ಯರಾದ ಶಂಕರಾಚಾರ್ಯರ ವಿಷಯದಲ್ಲಿ ಪಂಡಿತಾಚಾರ್ಯರು ಆಡಿದ ಮಾತುಗಳನ್ನು ಯಾವ ರೀತಿಯಾಗಿ ವಿಶ್ಲೇಷಿಸಬೇಕು? ಎಂದು ಪ್ರಶ್ನಿಸಿದರೆ, ಇಲ್ಲಿ ಸಾವಧಾನವಾಗಿ ಪ್ರವೃತ್ತರಾಗೋಣ. ಮಣಿಮಂಜರಿ ಎಂದರೆ ಕೇವಲ ಶಂಕರಾಚಾರ್ಯರ ಚರಿತ್ರೆಯಾಗಿಲ್ಲ. ಅದು ಆಚಾರ್ಯರ ಪೂರ್ವಕಾಲೀನ ಇತಿಹಾಸದ ಸಾರಸಂಗ್ರಹವಾಗಿದೆ. 'ಪೂರ್ವಕಾಲ' ಎಂಬುದು ಇಲ್ಲಿ ಸೃಷ್ಟಿಯಾದಿಯ ಸಮಯದವರೆಗೆ ಅರ್ಥವತ್ತಾಗಿದೆ. ಅಲ್ಲಿಂದ ಆಚಾರ್ಯರ ಕಾಲದವರೆಗಿನ ಸಂಗತಿಯನ್ನು ಸಂಕ್ಷೇಪ ವಿಸ್ತಾರಗಳಿಂದ ಸಂಗ್ರಹಿಸುವಾಗ ಮೂರು ಅಂಶಗಳಿಗೆ ಒತ್ತು ನೀಡಲಾಗಿದೆ. 1. ರಾಮಾಯಣ, 2. ಮಹಾಭಾರತ, 3. ಶಂಕರಾಚಾರ್ಯರ ಜೀವನ. ಈ ಮೂರನ್ನೆ ಏಕೆ ವಿಶೇಷವಾಗಿ ತಿಳಿಸಲಾಗಿದೆ? ಎಂದು ವಿಚಾರಮಾಡಿದರೆ, ಸುಮಧ್ವವಿಜಯಲ್ಲಿ ಸುಲಭವಾಗಿ ತಿಳಿಯದ ವಿಷಯಗಳನ್ನು ಇಲ್ಲಿ ಸ್ಫುಟವಾಗಿ ತಿಳಿಸುವ ಉದ್ದೇಶದಿಂದ ಪಂಡಿತಾಚಾರ್ಯರು ಈ ಮೂರಕ್ಕೆ ವಿಶೇಷವಾಗಿ ಒತ್ತು ನೀಡಿದ್ದಾರೆಂದು ಗೊತ್ತಾಗುತ್ತದೆ. ಮಧ್ವವಿಜಯದ ಪ್ರಥಮಸರ್ಗದಲ್ಲಿ ಹನುಮ-ಭೀಮ ರೂಪಗಳ ಬಗ್ಗೆ ಮಾತ್ರ ಕೇಂದ್ರೀಕೃತವಾದ ರಾಮಾಯಣ-ಮಹಾಭಾರತಗಳ ವಿಚಾರವನ್ನು ಇಲ್ಲಿ ಸಮಗ್ರವಾಗಿ ರಾಮ-ಕೃಷ್ಣ ರೂಪಗಳ ಪ್ರಾಮುಖ್ಯತೆಯಲ್ಲಿ ತಿಳಿಸಲಾಗಿದೆ. ಇದನ್ನು ಪ್ರತಿಪಾದಿಸುವ ಮೊದಲ ನಾಲ್ಕು ಸರ್ಗಗಳಲ್ಲಿ ಪಂಡಿತಾಚಾರ್ಯರ ವಿಷಯ ನಿರೂಪಣೆ ಹೇಗೆ ಪ್ರಾಮಾಣಿಕವೋ ಹಾಗೆಯೇ ಮುಂದಿನ ನಾಕು ಸರ್ಗದ ಬಗ್ಗೆಯೂ ದೃಷ್ಟಿ ಹರಿಸಬೇಕಷ್ಟೆ.

## ಶಾಂಕರಜೀವನವನ್ನು ತಿಳಿಸಲು ಕಾರಣವೇನು?

ಆಪಾತದೃಷ್ಟಿಯಿಂದ ಅವಲೋಕಿಸಿದಾಗ, ಪಂಡಿತಾಚಾರ್ಯರು ತಮ್ಮ ಗುರುಗಳ

ಚೆಲ್ಲುತ್ತಿದೆ. ಆಚಾರ್ಯರ ಅವತಾರಕ್ಕೆ ಪೂರ್ವದಲ್ಲಿ ಬಂದಿರುವ ಅನೇಕಮತಾಚಾರ್ಯರಲ್ಲಿ ಅದ್ವೈತ ಮತಸ್ಥಾಪಕರಾದ ಶಂಕರಾಚಾರ್ಯರ ವಿಚಾರ ಇಲ್ಲಿ ಸುದೀರ್ಘವಾಗಿ ಪ್ರಸ್ತುತವಾಗಿದೆ. 8 ಸರ್ಗದ ಈ ಕೃತಿಯಲ್ಲಿ 6-7ನೇ ಸರ್ಗಗಳು ಇದಕ್ಕೇ ಮೀಸಲಾಗಿವೆ. ಈ ಸರ್ಗಗಳಲ್ಲಿ ಬಂದ ಶಂಕರಾಚಾರ್ಯರ ಕಥಾಭಾಗವು ಕೆಲವು ಶಂಕರ ಅನುಯಾಯಿಗಳಿಗೆ ಪರಿತಾಪ ನೀಡುತ್ತಿದ್ದರೆ, ಕೆಲವು ಮಾಧ್ವ ಮತೀಯರಿಗೆ ಪರಮಾನಂದ ಉಕ್ಕೇರಿಸುತ್ತಿದೆ. ಆದರೆ ಅವರ ಪರಿತಾಪ-ಇವರ ಪರಮಾನಂದ, ಇವೆರಡೂ ಸಹ ದುರಾಗ್ರಹದ ಪರಿಣಾಮ ಮಾತ್ರವಾಗಿದೆ. ಮಣಿಮಂಜರಿಯ ಫಲವಾದುದಲ್ಲ. ಆಗ್ರಹ ತೊರೆದು ವಿಮರ್ಶಿಸಿದಾಗ, ಇದು ತಿರುವು-ಮುರವಾಗಬಹುದು. ಶ್ರೀಮದಾಚಾರ್ಯರ ಚರಿತ್ರೆಗೆ, ಆಚಾರ್ಯರ ಕಾಲದಲ್ಲೇ ಇದ್ದಂಥಹ, ಐತಿಹಾಸಿಕ ದೃಷ್ಟಿ ಹೊಂದಿದ ಪಂಡಿತಾಚಾರ್ಯರ ಸುಮಧ್ವವಿಜಯದಂತೆ ಶಂಕರಾಚಾರ್ಯರ ಬಗ್ಗೆ ಶಾಂಕರವಿರಚಿತವಾದ ಒಂದೂ ಅಧಿಕೃತಗ್ರಂಥವಿಲ್ಲವಾದಾಗ ಮಣಿಮಂಜರಿಯ ಈ ವಿಚಾರಕ್ಕೆ ಶಂಕರಾನುಯಾಯಿಗಳು ಏಕೆ ತಲೆಕೆಡಿಸಿಕೊಳ್ಳಬೇಕು? ಇದರಂತೆ, ಮಾಧ್ವರೂ ಸಹ ರಾವಣ-ದುರ್ಯೋಧನಾದಿ ದೈತ್ಯರ ಕಥಾಭಾಗವನ್ನು ರಾಮಾಯಣ-ಭಾರತಾದಿಗಳಲ್ಲಿ ಕೇಳಿದಾಗ ಆನಂದಿಸದೇ ಇರುವಾಗ, ಇಲ್ಲಿ ಮಾತ್ರ ಆನಂದಪಡಲು ಕಾರಣವಾದರೂ ಯಾವುದಿದೆ? ಆದ್ದರಿಂದ ಮಣಿಮಂಜರಿಯನ್ನು, ಕೆಲವು ಜನಗಳ ಪರಿತಾಪ-ಪರಮಾನಂದಗಳ ಚೌಕಟ್ಟಿನಲ್ಲಿ ನೋಡುತ್ತ ಮತೀಯ ದ್ವೇಷಾಸೂಯದ ಆವಿಷ್ಕಾರವಾಗಿ ಆಧುನಿಕ ಬುದ್ಧಿಜೀವಿಗಳು ವಿಮರ್ಶಿಸುವ ರೀತಿ ಮೌಢ್ಯತೆಯ ಪರಮಾವಧಿಯು.

ಆಗ್ರಹ ತೊರೆದು ನೋಡಿದರೆ ಮಣಿಮಂಜರಿಯ ಮಹತ್ತ್ವ ಮಹತ್ತರವಾಗಿ ತೋರುತ್ತದೆ. "ಶ್ರೀಮಧ್ವೋ ವಿಜಯೀ ಚ ಮಧ್ವವಿಜಯಃ ನಾರಾಯಣಪ್ರೋದ್ಭವಃ" ಎಂಬ ಅಂತಿಮ ನುಡಿಯನ್ನು ಗಮನಿಸಿದಾಗ ನಾರಾಯಣಪಂಡಿತಾಚಾರ್ಯರು ಸುಮಧ್ವವಿಜಯವನ್ನು ಬರೆದ ನಂತರವೇ ಮಣಿಮಂಜರಿಯನ್ನು ಬರೆದರೆಂದು ನಿಶ್ಚಯಿಸಬಹುದು. ಸುಮಧ್ವ ವಿಜಯವನ್ನು ಅವರು ಓರ್ವ ಕವಿಯಾಗಿ ಮಾತ್ರ ವಿರಚಿಸದೆ, ಐತಿಹಾಸಿಕ ಪ್ರಜ್ಞೆಯಿಂದ ನಿರೂಪಿಸಿರುವ ಸಂಗತಿಯನ್ನೂ ಅವರೇ ಬರೆದ ಮಧ್ವವಿಜಯದ ಟಿಪ್ಪಣಿಯಾದ ಭಾವಪ್ರಕಾಶಿಕೆಯಿಂದ ಗುರುತಿಸಬಹುದು.

> "ಪ್ರಾಯೇಣ ನೈಕಮಾತ್ರೋಕ್ತಾಃ ಕಥಿತಾ ಇಹ ಸರ್ವಶಃ ।
> ಮಾಯಾ ದೃಷ್ಟ್ವಾ ಧ್ರುವಮಿತಿ ಪ್ರೋಕ್ತಾಃ ಪ್ರಾಯೇಣ ಪೂರುಷೈಃ ॥
> ದ್ವಯೋರ್ವಕ್ತ್ರೋರ್ವಿರೋಧೇಽತ್ರ ಸ್ವೀಕೃತಾ ಪ್ರಬಲಸ್ಯ ಗೀಃ ।
> ತುಲ್ಯಂ ತತ್ ಸೂಕ್ಷ್ಮ ದೃಷ್ಟ್ಯಾದೌ ದೈವೇ ನೈವ ಪರೀಕ್ಷ್ಯತೇ ॥
>
> ಕಾವ್ಯಶ್ರಿಯೇ ವಾ ಗುರುಕೀರ್ತಯೇವಾ ಪ್ರೋಕ್ತಂ ಸ್ವಯೈವಾಪಿ ಮನೀಷಯೇತಿ ॥
> ತಸ್ಮಾನ್ನ ಶಂಕ್ಯೇತ ಮಹಾಜನೇನ ಪುಂಸಾ ಕುಶಾಗ್ರೀಯಧಿಯಾಽಪ್ಯವಶ್ಯಮ್ ॥"
>
> (ಭಾವಪ್ರಕಾಶಿಕಾ)

(ಇಲ್ಲಿ ಹೇಳಿದ್ದೆಲ್ಲವೂ ಪ್ರಾಯಃ ಒಬ್ಬರೇ ಹೇಳಿದ ವಿಷಯವಾಗಿಲ್ಲ. 'ಸತ್ಯವಾಗಿ ನಾ ಕಂಡೆನೆಂದು' ಜನರು ಹೇಳಿದ್ದನ್ನೇ ಹೇಳಲಾಗಿದೆ. ಹೇಳುವಾಗ ಇಬ್ಬರ ನಡುವೆ ವಿರೋಧ ತೋರಿದಾಗ ಈರ್ವರಲ್ಲಿ ಹೆಚ್ಚು ವಿಶ್ವಾಸಕ್ಕೆ ಅರ್ಹನಾಗುವವನ ಮಾತನ್ನು ಒಪ್ಪಲಾಗಿದೆ. ಸೂಕ್ಷ್ಮದೃಷ್ಟಿಯ ವಿಷಯದಲ್ಲಿಯೂ ಸಹ ಇದೇ ನ್ಯಾಯ ಸಮಾನವಾಗಿದೆ. ಆದರೆ ದೈವೀಕ ಘಟನೆಗಳ ವಿಷಯದಲ್ಲಿ ಈ ಪರೀಕ್ಷೆ ಸಾಧ್ಯವಿಲ್ಲ. ಆದ್ದರಿಂದ, "ಕಾವ್ಯದ ಸೊಬಗು ಗಳಿಸಲೆಂದಾಗಲಿ, ಗುರುಗಳ ಕೀರ್ತಿ ಹೆಚ್ಚಿಸುವುದಕ್ಕಾಗಲಿ, ತನ್ನದೇ ಬುದ್ಧಿವಂತಿಕೆಯಿಂದ ಹೇಳಿದ ವಿಷಯ"ವೆಂದು, ಕುಶಾಗ್ರಮತಿಗಳಾದ ಉನ್ನತ ವ್ಯಕ್ತಿತ್ವದ ಬುದ್ಧಿಜೀವಿಗಳು ಕಿಂಚಿತ್ತೂ ಶಂಕೆ ಮಾಡದಿರಲಿ.)

ಈ ಹಿನ್ನೆಲೆಯಿಂದ ಮಣಿಮಂಜರಿಯನ್ನು ರಚಿಸುವ ಪೂರ್ವದಲ್ಲಿ ನಾರಾಯಣ ಪಂಡಿತಾಚಾರ್ಯರ ಮನಸ್ಥಿತಿಯನ್ನು ಗಮನಿಸಿದಾಗ, ಈ ಕೃತಿ ದ್ವೇಷಾಸೂಯದ ಆವಿಷ್ಕಾರ ಕ್ಕಾಗಿಯೇ ಹೊರಬಂದಿದೆಯೆಂಬ ಆಕ್ಷೇಪ ಅರ್ಥಹೀನವಾಗುತ್ತದೆಯಷ್ಟೆ. ಇದಲ್ಲದೆ, ಶ್ರೀಮದಾ ಚಾರ್ಯರ ಪೂರ್ವಕಾಲೀನ ಚಾರಿತ್ರಿಕ ಘಟನೆಗಳ ಅಧ್ಯಯನಕ್ಕೆ ಇದೊಂದು ಅಪೂರ್ವ ಸಲಕರಣೆಯೆಂದು ತಿಳಿಯುವುದು, ಅಧ್ಯಯನಶೀಲ ಸಮಾಜದ ಕರ್ತವ್ಯವೆಂದೇ ಆಗುವುದಷ್ಟೆ

ಹಾಗಾದರೆ, ಲೋಕವಿಖ್ಯಾತ ಮತಾಚಾರ್ಯರಾದ ಶಂಕರಾಚಾರ್ಯರ ವಿಷಯದಲ್ಲಿ ಪಂಡಿತಾಚಾರ್ಯರು ಆಡಿದ ಮಾತುಗಳನ್ನು ಯಾವ ರೀತಿಯಾಗಿ ವಿಶ್ಲೇಷಿಸಬೇಕು? ಎಂದು ಪ್ರಶ್ನಿಸಿದರೆ, ಇಲ್ಲಿ ಸಾವದಾನವಾಗಿ ಪ್ರವೃತ್ತರಾಗೋಣ. ಮಣಿಮಂಜರಿ ಎಂದರೆ ಕೇವಲ ಶಂಕರಾಚಾರ್ಯರ ಚರಿತ್ರೆಯಾಗಿಲ್ಲ. ಅದು ಆಚಾರ್ಯರ ಪೂರ್ವಕಾಲೀನ ಇತಿಹಾಸದ ಸಾರಸಂಗ್ರಹವಾಗಿದೆ. 'ಪೂರ್ವಕಾಲ' ಎಂಬುದು ಇಲ್ಲಿ ಸೃಷ್ಟಿಯಾದಿಯ ಸಮಯದವರೆಗೆ ಅರ್ಥವತ್ತಾಗಿದೆ. ಅಲ್ಲಿಂದ ಆಚಾರ್ಯರ ಕಾಲದವರೆಗಿನ ಸಂಗತಿಯನ್ನು ಸಂಕ್ಷೇಪ ವಿಸ್ತಾರಗಳಿಂದ ಸಂಗ್ರಹಿಸುವಾಗ ಮೂರು ಅಂಶಗಳಿಗೆ ಒತ್ತು ನೀಡಲಾಗಿದೆ. 1. ರಾಮಾಯಣ, 2. ಮಹಾಭಾರತ, 3. ಶಂಕರಾಚಾರ್ಯರ ಜೀವನ. ಈ ಮೂರನ್ನೆ ಏಕೆ ವಿಶೇಷವಾಗಿ ತಿಳಿಸಲಾಗಿದೆ? ಎಂದು ವಿಚಾರಮಾಡಿದರೆ, ಸುಮಧ್ವವಿಜಯಲ್ಲಿ ಸುಲಭವಾಗಿ ತಿಳಿಯದ ವಿಷಯಗಳನ್ನು ಇಲ್ಲಿ ಸ್ಫು ಟವಾಗಿ ತಿಳಿಸುವ ಉದ್ದೇಶದಿಂದ ಪಂಡಿತಾಚಾರ್ಯರು ಈ ಮೂರಕ್ಕೆ ವಿಶೇಷವಾಗಿ ಒತ್ತು ನೀಡಿದ್ದಾರೆಂದು ಗೊತ್ತಾಗುತ್ತದೆ. ಮಧ್ವವಿಜಯದ ಪ್ರಥಮಸರ್ಗದಲ್ಲಿ ಹನುಮ-ಭೀಮ ರೂಪಗಳ ಬಗ್ಗೆ ಮಾತ್ರ ಕೇಂದ್ರೀಕೃತವಾದ ರಾಮಾಯಣ-ಮಹಾಭಾರತಗಳ ವಿಚಾರವನ್ನು, ಇಲ್ಲಿ ಸಮಗ್ರವಾಗಿ ರಾಮ-ಕೃಷ್ಣ ರೂಪಗಳ ಪ್ರಾಮುಖ್ಯತೆಯಲ್ಲಿ ತಿಳಿಸಲಾಗಿದೆ. ಇದನ್ನು ಪ್ರತಿಪಾದಿಸುವ ಮೊದಲ ನಾಲ್ಕು ಸರ್ಗಗಳಲ್ಲಿ ಪಂಡಿತಾಚಾರ್ಯರ ವಿಷಯ ನಿರೂಪಣೆ ಹೇಗೆ ಪ್ರಾಮಾಣಿಕವೋ ಹಾಗೆಯೇ ಮುಂದಿನ ನಾಕು ಸರ್ಗದ ಬಗ್ಗೆಯೂ ದೃಷ್ಟಿ ಹರಿಸಬೇಕಷ್ಟೆ.

## ಶಾಂಕರಜೀವನವನ್ನು ತಿಳಿಸಲು ಕಾರಣವೇನು?

ಆಪಾತದೃಷ್ಟಿಯಿಂದ ಅವಲೋಕಿಸಿದಾಗ, ಪಂಡಿತಾಚಾರ್ಯರು ತಮ್ಮ ಗುರುಗಳ

ವಿಷಯವನ್ನು ಬಿಟ್ಟು ಮತ್ತೊಬ್ಬರ ಉಸಾಬರಿಗೆ ಏಕೆ ಹೋಗಬೇಕೆಂಬ ಪ್ರಶ್ನೆ ಬರುವುದುಂಟು. ಆದರೆ ಆಚಾರ್ಯರ ಪೂರ್ವಕಾಲೀನವಾದ ವೇದಾಂತವಿಚಾರದ ಕಲುಷಿತ ವಾತಾವರಣದಲ್ಲಿ ಶಂಕರಾಚಾರ್ಯರ ಪಾಲು ಹಿರಿದಾಗಿದ್ದನ್ನು ಪ್ರಸ್ತಾಪಿಸಿ, ಅದರ ಹಿನ್ನೆಲೆಯಲ್ಲಿ ಶ್ರೀಮದಾಚಾರ್ಯರ ಅವತಾರದ ಆವಶ್ಯಕತೆಯನ್ನು ಸುಮಧ್ವವಿಜಯದಲ್ಲಿ ಪ್ರತಿಪಾದಿಸಿದ ಪಂಡಿತಾಚಾರ್ಯರಿಗೆ ಮಧ್ವವಿಜಯ ರಚನಾನಂತರದಲ್ಲಿ ಕೆಲವು ವಿಷಯಗಳ ವಿಸ್ತಾರದ ವಿವರಣೆ ಆವಶ್ಯಕವೆನಿಸಿ, ಈ ನಾಕು ಸರ್ಗಗಳ ಪ್ರವೃತ್ತಿ ಉಂಟಾಗಿದೆಯೆಂದು ಗುರುತಿಸಬಹುದು. ಮಧ್ವವಿಜಯದಲ್ಲಿ ಆಚಾರ್ಯರ ಪೂರ್ವಪರಂಪರೆಯ ಚಿತ್ರಣ ಸ್ಪಷ್ಟವಾಗಿಲ್ಲ. ಈ ಪರಂಪರೆಯ ಪ್ರಾಜ್ಞತೀರ್ಥರು - ಸತ್ಯಪ್ರಜ್ಞರು - ಪರತೀರ್ಥರು ಇವರ ವಿಚಾರವೆಲ್ಲ ಮಣಿಮಂಜರಿಯಲ್ಲೇ ಕಾಣುವಂತಾಗಿದೆ. ಶಂಕರಾಚಾರ್ಯರ ಕಾಲದಲ್ಲಿಯೂ ಎಲೆ ಮರೆ ಕಾಯಿಯಂತೆ ಉಳಿದುಕೊಂಡು ಬಂದಿದ್ದ ಈ ಪರಂಪರೆ ಉಜ್ವಲವಾಗಿ ಪ್ರಕಾಶವಾಗದಂತೆ ಆಗಲು ಎರಡು ಕಾರಣಗಳಿದ್ದವು. ಶಂಕರಾಚಾರ್ಯರ ಪೂರ್ವದಲ್ಲಿ ಬೌದ್ಧಮತದ ಹಾವಳಿಯಿಂದ ವೈದಿಕಮತವು ಬಹಿರಂಗವಾಗಿ ಪ್ರಚಾರಗಳಿಸಲಸಾಧ್ಯವಾಗಿತ್ತೆಂಬುದು ಒಂದು ಕಾರಣವಾದರೆ, ಆನಂತರ ಕುಮಾರಿಲ ಭಟ್ಟರಿಂದ ವೈದಿಕ ಮತ ಮರುಜೀವ ಪಡೆದಮೇಲೂ, ಶಂಕರಾನುಯಾಯಿಗಳ ದಬ್ಬಾಳಿಕೆಯಿಂದ ಈ ಪರಂಪರೆ ಅನುಭವಿಸಿದ ಸಂಕಟ ಎರಡನೆಯ ಕಾರಣವಾಗಿತ್ತು. ಇವೆರಡರಲ್ಲಿ ಮೊದಲನೆಯ ಕಾರಣ ಲೋಕಪ್ರಸಿದ್ಧವಾದ್ದರಿಂದ ಎರಡನೆಯದನ್ನೇ ವಿಶೇಷವಾಗಿ ಪ್ರಸ್ತಾಪಿಸಬೇಕಾದುದು ಪಂಡಿತಾಚಾರ್ಯರಿಗೆ ಉಚಿತವಾಗಿ ತೋರಿರಬೇಕು. ಇದನ್ನು ತಿಳಿಸುವಾಗ ದಬ್ಬಾಳಿಕೆ ದೌರ್ಜನ್ಯಗಳ ದೈತ್ಯಪ್ರವೃತ್ತಿಗೆ ಮೂಲಭೂತವಾದ ಕಾರಣವೇನೆಂದು ಸ್ಫುಟವಾಗಲು ಶಂಕರಾಚಾರ್ಯರ ಜೀವಸ್ವರೂಪವಾದ ಮಣಿಮಂತನ ವಿಚಾರ, ಆನಂತರದ ಜನನ-ಮರಣ ಪರ್ಯಂತದ ಜೀವನವಿಚಾರ ಹಾಗೂ ಆ ಕಾಲದ ಇನ್ನಿತರ ಸಂಗತಿಗಳನ್ನು ತಿಳಿಸಬೇಕಾದುದು ಪಂಡಿತಾಚಾರ್ಯರ ಕರ್ತವ್ಯವೇ ಆಗುವುದಷ್ಟೇ. ಇದನ್ನು ಅರ್ಥಮಾಡಿಕೊಳ್ಳದೆ ಕೇವಲ ಮತೀಯ ದ್ವೇಷಾಸೂಯದ ಹಿನ್ನೆಲೆಯ ಬುದ್ಧಿಯಿಂದ ಬೆಳೆದ ಮಂದಿಗೆ, ಈ ಮಣಿಮಂಜರಿಯೂ ಹಾಗೇ ತೋರಿದರೆ ಅದಕ್ಕೆ ಯಾರು ಹೊಣೆ?

ಇದಲ್ಲದೆ ಇಲ್ಲಿ ಇನ್ನೊಂದು ಕಾರಣವೂ ಇದ್ದಿರಬಹುದು. ಸುಮಧ್ವವಿಜಯದ ರಚನೆಯಾದ ಮೇಲೆ ಆನಂತರದ ಸಮೀಪಕಾಲದಲ್ಲಿಯೇ ಮಾಧವೀಯಾದಿ ಶಂಕರವಿಜಯದ ರಚನೆಯನ್ನು ಗಮನಿಸಿದಾಗ, ಮಧ್ವಾಚಾರ್ಯರ ದೇವತಾಮಾನ್ಯ ಚರಿತೆಯನ್ನು ಕಂಡು, ಶಂಕರಾಚಾರ್ಯರ ಚರಿತೆಯನ್ನೂ ಸಹ ಹಾಗೆಯೇ ವೈಭವೀಕರಿಸುವ ಪ್ರಯತ್ನ ಶಂಕರಾನುಯಾಯಿಗಳಲ್ಲಿ ಆ ಕಾಲದಲ್ಲೇ ಆರಂಭಗೊಂಡಿತೆಂದು ಊಹಿಸಬಹುದು. ಶಾಂಕರ ಪ್ರಕ್ರಿಯೆಯಲ್ಲಿ, ದೇವಾಂಶಸಂಭೂತರೆಂಬ ವಿಚಾರಕ್ಕೆ, ಆ ಕಾಲಕ್ಕಿಂತ ಹಿಂದೆ ಯಾವುದೇ ಮೌಲಿಕ ದಾರ್ಶನಿಕ ಕೃತಿಗಳಲ್ಲಿ ಪ್ರಾಮುಖ್ಯತೆ ಕಾಣದಿರುವುದರಿಂದ, ಈ ಮಾಧವೀಯಾದಿ ಶಂಕರವಿಜಯಗಳ ರೀತಿ-ನೀತಿಗಳೆಲ್ಲ ಮಧ್ವವಿಜಯದ ಪ್ರಭಾವದಲ್ಲೇ ಉಂಟಾಗಿರಬೇಕೆಂಬ

ಊಹೆ ತೆಗೆದುಹಾಕುವಂತದ್ದಲ್ಲ. ಈ ಪ್ರವೃತ್ತಿಯನ್ನು ಗಮನಿಸಿಯೇ ಪಂಡಿತಾಚಾರ್ಯರು ಆ ಕಾಲದಲ್ಲಿ ಪ್ರಚಲಿತವಾಗಿದ್ದ ಶಾಂಕರ ಜೀವನದ ವಿಚಾರಗಳನ್ನೆಲ್ಲ ಮುಂದಿನ ಜನಾಂಗಕ್ಕೆ ದಾಖಲಿಸುವ ಕೆಲಸವನ್ನೂ ಮಾಡಿರಬೇಕೆಂದು ತೋರುತ್ತದೆ. ಪಂಡಿತಾಚಾರ್ಯರು ಶಾಂಕರದರ್ಶನದ ಪ್ರಕಾಂಡಪಾಂಡಿತ್ಯ ಹಾಗೂ ಶಂಕರಾನುಯಾಯಿಗಳ ಒಡನಾಟ ಎರಡನ್ನೂ ಸಮರ್ಪಕವಾಗಿ ಹೊಂದಿದಷ್ಟೇ ಅಲ್ಲದೆ, ಶಂಕರಾಚಾರ್ಯರ ಜನ್ಮಸ್ಥಳವಾದ ಕೇರಳದ ಸಮೀಪದ ಕಾಸರಗೋಡಿನಲ್ಲೇ ನೆಲೆಸಿದ್ದರಿಂದ ಹೆಚ್ಚು ಅಧಿಕೃತವಾಗಿ ಶಂಕರಾಚಾರ್ಯರ ಜೀವಮಾನದ ಘಟನೆಗಳನ್ನು ತಿಳಿದವರಾದ್ದರಿಂದಲೂ ಈ ಕೆಲಸಕ್ಕೆ ಸೂಕ್ತ ವ್ಯಕ್ತಿಗಳೆಂದು ಊಹಿಸಬಹುದಾಗಿದೆ. ಇನ್ನೂ ಹೆಚ್ಚಿನ ವಿಚಾರವೆಲ್ಲ ರಾಯಪಾಳ್ಯ ರಾಘವೇಂದ್ರಾಚಾರ್ಯರ ಲೇಖನದಲ್ಲಿ ಕಾಣಬಹುದೆಂದು, ನಾನೀಗ ಮಣಿಮಂಜರಿಯ ಬಗ್ಗೆ ಮಾತಾಡುವುದು ಸಾಕೆಂದೆನಿಸುತ್ತದೆ.

## ಮಣಿಮಂಜರಿಯ ನಂತರ

ಹೀಗೆ ಐತಿಹಾಸಿಕ ಮೌಲ್ಯ ಗಳಿಸಿರುವ ಈ ಮಣಿಮಂಜರಿಗೆ ಪ್ರತಿಯಾಗಿ ಅನೇಕ ಗ್ರಂಥಗಳು ಪ್ರವೃತ್ತವಾಗಿವೆ. ಮತಾಭಿಮಾನದ ಪರಾಕಾಷ್ಠೆಗೆ ಈ ಗ್ರಂಥಗಳೆಲ್ಲ ಒರೆಗಲ್ಲಾಗಿವೆ ಯೆಂದರೆ ತಪ್ಪಾಗದು. ಐತಿಹಾಸಿಕಪ್ರಜ್ಞೆಯಿಲ್ಲದೆ ಕೇವಲ ಅಭಿಮಾನಕ್ಕೆ ಹುಟ್ಟಿಕೊಂಡ ಈ ತರಹದ ಕೃತಿಗಳಿಗೆ ಯಾವುದೇ ಸತ್ವವಿರುವುದಿಲ್ಲ. ಆದರೂ ಅದನ್ನು ಪ್ರಕಾಶಿಸಬೇಕೆಂದು ಪ್ರವೃತ್ತರಾಗು ತ್ತಾರೆ. ಶಂಕರಾಚಾರ್ಯರ ಚರಿತೆಯನ್ನು ನಿಷ್ಠುರವಾಗಿ ನಿರೂಪಿಸಿದ ಮಣಿಮಂಜರಿಯನ್ನು ಬರೆದ ನಾರಾಯಣಪಂಡಿತಾಚಾರ್ಯರನ್ನು ಹಾಗೂ ಅವರ ಮತಾಚಾರ್ಯರನ್ನು ನಿಂದಿಸಿ ನಾಲ್ಕು ಮಾತು ರಚಿಸಿದರೆ, ಹಾಗೂ ಅದನ್ನು ಪ್ರಕಾಶಪಡಿಸಿದರೆ ಮಣಿಮಂಜರಿಗೆ ಉತ್ತರಕೊಟ್ಟೆವೆಂದು ಭಾವಿಸುತ್ತಾರೆ. ಇದೇ ಕೆಲಸ ಬೇರೆ ಮತಾಚಾರ್ಯರ ಅನುಯಾಯಿ ಮಾಡಿದ್ದರೆ, ಆಗ ಆ ಮತಾಚಾರ್ಯರ ನಿಂದೆಯೇ ಇವರ ಉತ್ತರವಷ್ಟೆ ಈ ಮತಾಚಾರ್ಯರ ಬಗ್ಗೆ ಆಗ ಚಕಾರವೂ ಬರುತ್ತಿರಲಿಲ್ಲ. ಇದು ಎಲ್ಲರಿಗೂ ಅರ್ಥವಾಗುವ ಸಂಗತಿಯೇ ಆಗಿದೆ. ಹೀಗೆ ಮಣಿಮಂಜರಿಗೆ ಪ್ರತಿಯಾಗಿ ನಿರ್ಮಾಣಗೊಂಡ ಕೃತಿಗಳಲ್ಲಿ ಇತ್ತೀಚಿಗೆ ಪ್ರಕಾಶಿತವಾದ ಮಾಣಿಕ್ಯಮಂಜರಿಯೂ ಸಹ ಒಂದು.

## ಮಾಣಿಕ್ಯಮಾಂಜರಿಯ ಪ್ರಕಾಶನದ ಆವಶ್ಯಕತೆ ಏನಿದೆ?

ಈ ಕೃತಿಯನ್ನು ಪ್ರಕಾಶಿಸುವ ವ್ಯಕ್ತಿಯು ಗ್ರಂಥಪೂರ್ವದಲ್ಲಿ ವಿಜ್ಞಾಪಿಸುತ್ತ ಆಡಿದ ಮಾತೊಂದನ್ನು ನಾನಿಲ್ಲಿ ಪ್ರಸ್ತಾಪಿಸುವೆ. ''ಅನೇನ ಸ್ವಸ್ವಮತಾಭಿಮಾನೇನ ಸ್ವಕೀಯಗ್ರಂಥ ಪ್ರಕಾಶನಂ ಪರಮತನಿರಾಕರಣಂ ವಾ ಸತ್ವಗುಣಸಂಪನ್ನಾನಾಮಪಿ ವಿದುಷಾಂ ನ ದೋಷಾವಹ ಮಿತಿ ಕರ್ತವ್ಯಮೇವೇತಿ ಚ ವಿಜ್ಞಾಯತೆ'' (ತಮ್ಮ ತಮ್ಮ ಮತದ ಮೇಲಣ ಅಭಿಮಾನದಿಂದ ತಮ್ಮವರ ಗ್ರಂಥಗಳನ್ನು ಪ್ರಕಾಶಿಸುವುದು ಅಥವಾ ಪರಮತಗಳನ್ನು ನಿರಾಕರಿಸುವುದು,

ಸಾತ್ವಿಕಗುಣ ಮಂಡಿತರಾದ ಪಂಡಿತರಿಗೂ ದೋಷ ತರದೆ ಕರ್ತವ್ಯವೇ ಆಗುವುದೆಂದು ಇದರಿಂದ ತಿಳಿಯುತ್ತದೆ.) ಈ ಮಾತನ್ನು ಕಂಡಾಗ ಮಾಣಿಕ್ಯ ಮಂಜರಿಯ ಹಿನ್ನೆಲೆ ಕೇವಲ ಮತೀಯ ದುರಭಿಮಾನವೆಂದು ಯಾರಿಗೆ ತೋರಲಾರದು? ಈ ದುರಭಿಮಾನಿ ಜೀವರು ಯಾವ ಮತ ಜನಾಂಗದಲ್ಲಿ ಜನಿಸಿದ್ದರೂ ಅದೇ ಸರಿಯೆಂದು ವಾದಿಸಬೇಕೆಂಬ ಹಠದಿಂದ ಆತ್ಮಪ್ರಜ್ಞೆಯನ್ನೇ ಕಳೆದುಕೊಳ್ಳುವರೇ ಆಗಿರುತ್ತಾರೆ. ಅಭಿಮಾನ ತೊರೆದು ಪ್ರಮಾಣಗಳ ಹಾದಿಯಲ್ಲಿ ಕಾಣಬೇಕಾದ ವೇದ-ವೇದಾಂತಗಳ ವಿಚಾರವನ್ನು, ಜೀವ ಬಂಧಕವಾದ ಈ ತರಹ ಅಭಿಮಾನದ ಪೋಷಣೆಗಾಗಿ ಬಳಸಿದರೆ ಸ್ವಯಂಕೃತಾಪರಾಧವಷ್ಟೆ

ತ್ರಿಮತಸ್ಥ ವಿದ್ವನ್ಮಾನ್ಯರೂ ಮತತ್ರಯದ ವಿದ್ಯಾರ್ಥಿಗಳಿಗೆ ಮೀಮಾಂಸಾಪ್ರಾಧ್ಯಾಪಕರೂ ಆದ ಶ್ರೀ ಚತುರ್ವೇದಿ ರಾಮಚಂದ್ರಾಚಾರ್ಯರು "ವಿಷ್ಣುತತ್ತ್ವ ದೀಪಿಕಾ" ಎಂಬ ಗ್ರಂಥವನ್ನು ಶೋಧಿಸಿ ಪ್ರಕಾಶಿಸಲು ನೆರವಾದಂತೆ, ಈ ಮಾಣಿಕ್ಯ ಮಂಜರಿಯ ಪ್ರಕಾಶನವು ಮತಾಭಿಮಾನದ ಕೆಲಸವಾದರೂ ಸರಿಯಾದುದೆಂದು ಸಮರ್ಥಿಸಿಕೊಳ್ಳುವ ಮಾತೊಂದು ಆ ವಿಜ್ಞಾಪನೆಯಲ್ಲಿ ಬಂದಿದೆ. ಇದನ್ನು ಕಂಡು ಶ್ರೀ ಚತುರ್ವೇದಿ ರಾಮಚಂದ್ರಾಚಾರ್ಯರ ವಿಚಾರವೇನೆಂದು ತಿಳಿಯಲು ಆ ಗ್ರಂಥ ತರಿಸಿ ನೋಡಿದರೆ, ಅದಕ್ಕೂ ಮಾಣಿಕ್ಯಮಂಜರಿಗೂ ಯಾವ ಸಾಮ್ಯತೆಯೂ ಇರುವುದಿಲ್ಲ. ನ್ಯಾಯ-ಮೀಮಾಂಸಾದಿ ಶಾಸ್ತ್ರನ್ಯಾಯಗಳ ಸಂಚಾರದಿಂದ ಗಂಭೀರ ವಿಚಾರಗರ್ಭಿತವಾಗಿ ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುವ ಆ ಗ್ರಂಥಕ್ಕೂ ಕೀಳು ಮತಾಭಿಮಾನದ ಹಿನ್ನೆಲೆಯುಳ್ಳ ಈ ಮಾಣಿಕ್ಯಮಂಜರಿಗೂ ಇರುವ ಅಂತರ ಮತಾಭಿಮಾನದಿಂದ ಕುರುಡಾದವರಿಗೆ ಹೇಗೆ ಕಂಡೀತು?

ಇಷ್ಟಾದರೂ, ಈ ಮಾ-ಮಂಜರಿಯನ್ನು ಸಮರ್ಥಿಸಲು ಘಟನೆಯೊಂದನ್ನು ಪ್ರಸ್ತಾಪಿಸಲಾಗಿದೆ. ಒಮ್ಮೆ ಮಾಧ್ವಮತದ ಒಬ್ಬ ಆಚಾರ್ಯರು ಕೇಳಿದರಂತೆ - "ಸಂಸ್ಕೃತ ಬಲ್ಲವರಾಗಿ ಮಣಿಮಂಜರಿಯನ್ನು ಓದಿಲ್ಲವಾದರೆ ಏನುಪಯೋಗ? ಅಲ್ಲಿ ಶಂಕರಾಚಾರ್ಯರ ಸಮಗ್ರಪರಿಚಯವಿದೆಯೆಂದು" ಹೇಳಿದರಂತೆ. ಆಗ ಮನದೊಳಗೆ ಕಸಿವಿಸಿಕೊಂಡ ಈ ವಿಜ್ಞಾಪನ ಮಾಡುವ ವ್ಯಕ್ತಿಗೆ ಶಂಕರಭಗವತ್ಪಾದರ ನಿಂದೆಯನ್ನು ತೊಳೆಯಬೇಕೆಂದು ಮನಸ್ಸಾಗುತ್ತಿದ್ದಂತೆ, ಒಂದು ವಾರದೊಳಗೇ ಈ ಮಾಣಿಕ್ಯಮಂಜರಿಯು ಕಾಕತಾಳೀಯವಾಗಿ ದೊರೆಯಿತಂತೆ. ಅದನ್ನು ಕಂಡಮೇಲೆ ಮಾಧ್ವರಿಗೆ ಆ ವ್ಯಕ್ತಿ ಹೀಗೆ ಹೇಳುತ್ತಾನಂತೆ :- "ಸಂಸ್ಕೃತವನ್ನು ಕಲಿತು ಮಾಣಿಕ್ಯ ಮಂಜರಿಯನ್ನು ತಿಳಿದಿಲ್ಲವಾದರೆ ಅದರಿಂದ ಏನು ಉಪಯೋಗ? ಇಲ್ಲಿ ಪೂರ್ಣಪ್ರಜ್ಞರ ಪೂರ್ಣಪರಿಚಯವಿದೆ" ಎಂದು.

ಮಾಣಿಕ್ಯ ಮಂಜರಿಯನ್ನು ಪ್ರಕಾಶಿಸುವ ಈ ಮಹಾಶಯನ ಈ ಮಾತುಗಳನ್ನು ನೋಡಿದಾಗ, ಇವನ ಸ್ನೇಹಿತ ಮಾಧ್ವ ಆಚಾರಿಯು ಇವನಿಗಾಡಿದ ಚುಚ್ಚು ಮಾತು ಹಾಗೂ ಅದಕ್ಕೆ ಪ್ರತಿಯಾಗಿ ಇವನಿಗೂ ಚುಚ್ಚು ಮಾತಾಡಲು ಈ ಮಾ-ಮಂಜರಿ ದೊರೆತ ಬಗೆಯ ಕಥೆ

ನಿಜವಿರಲಿ-ಸುಳ್ಳಾಗಿರಲಿ, ಈ ಮಾ-ಮಂಜರಿಯ ಪ್ರಕಾಶನದ ಹಿನ್ನೆಲೆ ದ್ವೇಷಾಸೂಯಗಳ ಪರಾಕಾಷ್ಠೆಯೆಂಬುದಂತೂ ನಿಜವೇ ಆಗಿರುತ್ತದೆ. ಸಂಸ್ಕೃತವೇ ಗೊತ್ತಿಲ್ಲವೆಂದು ಆ ಮಾಧ್ವ ಸ್ನೇಹಿತನನ್ನು ಮೂದಲಿಸುವ ಈ ವಿಜ್ಞಾಪನಕಾರನು, ಜ್ಞಾನವಿಲ್ಲದೆ ಮತಾಭಿಮಾನದಿಂದ ಅವನಾಡಿದ ಮಾತಿಗೆ ತಲೆಕೆಡಿಸಿಕೊಂಡನೆಂದರೆ, ಅವನಿಗೂ ಇವನಿಗೂ ಏನು ಅಂತರ? ಅವ ನಂತೆ ಇವನೂ ಚುಚ್ಚುಮಾತಾಡಬೇಕೆಂದು ಬಯಸಿ ಅದಕ್ಕೆ ಈ ಮಾ-ಮಂಜರಿ ದೊರೆಯಿತೆಂದು ಉಬ್ಬಿದರೆ, ಈ ಮಾ-ಮಂಜರಿಯ ಉಪಯೋಗ ಏನೆಂದು ಹೆಚ್ಚು ಹೇಳುವುದೇನಿದೆ?

ನಿಜವಾಗಿ ಆತ ವಿವೇಕಿಯೇ ಆಗಿದ್ದಲ್ಲಿ ಈ ಸಂದರ್ಭದಲ್ಲಿ ಆರಿಸಿಕೊಳ್ಳಬೇಕಾದ ದಾರಿ ಬೇರೆಯೇ ಆಗಬೇಕಿತ್ತು. ತನ್ನ ಮತಾಚಾರ್ಯರಾದ ಶಂಕರಾಚಾರ್ಯರ ಬಗ್ಗೆ ಮಣಿಮಂಜರಿಯಲ್ಲಿ ಬಂದ ವಿಚಾರದಿಂದ ಮನನೊಂದುವ ಅಭಿಮಾನಿಯಾಗಿದ್ದರೆ, ಶಂಕರರ ನೈಜ ಜೀವನಕ್ಕೆ ಆಧಾರವಾಗುವ ಮಣಿಮಂಜರಿಗಿಂತಲೂ ಪ್ರಾಚೀನವಾದ ಗ್ರಂಥದ ಅನ್ವೇಷಣೆ ಮಾಡಬೇಕಿತ್ತು. ಐತಿಹಾಸಿಕ ಪ್ರಜ್ಞೆಯಿಂದ ವರ್ತಿಸಿ ವಿಮರ್ಶಿಸಬೇಕಿತ್ತು. ಮಧ್ವಾಚಾರ್ಯರನ್ನು ಬೈದಮಾತ್ರಕ್ಕೆ ಶಂಕರಾಚಾರ್ಯರ ನಿಂದೆ ತೊಳೆದು ಹೋಗದೆಂದು ಅರ್ಥಮಾಡಿಕೊಳ್ಳಬೇಕಿತ್ತು.

ಶಾಂಕರಚರಿತೆಗೆ ಐತಿಹಾಸಿಕವಾಗಿ ಖಚಿತ ಮಾಹಿತಿ ನೀಡುವ ಗ್ರಂಥಗಳು ಸಿಗದೆ ಒದ್ದಾಡುವ ಸಂದರ್ಭವಾದರೆ, ಶಾಂಕರ ಮತದ ನಿರ್ದುಷ್ಟತೆಯನ್ನು ಸಮರ್ಥಿಸಿ, ಶಾಂಕರ ವಿಚಾರದಲ್ಲಿ ಕಳಂಕವಿಲ್ಲವಾದ್ದರಿಂದ ಅವರು ದೇವತಾಸ್ವರೂಪರೆಂದು ಸಮರ್ಥಿಸಬೇಕಾಗಿತ್ತು. ದುರ್ಗಮವಾದ ಈ ಕೆಲಸಕ್ಕೆ, ಮಾಧ್ವೀಯ ಮೌಲಿಕಗ್ರಂಥಗಳಾದ ನ್ಯಾಯಸುಧಾ-ನ್ಯಾಯಾ ಮೃತ-ಚಂದ್ರಿಕಾ ಇತ್ಯಾದಿಗಳಲ್ಲಿ ಬರುವ ಅದ್ವೈತಮತಖಂಡನಾತ್ಮಕ ವಾಕ್ಯಾರ್ಥಗಳಿಗೆ ಉತ್ತರ ನೀಡುವ ಸಾಹಸ ಮಾಡಬೇಕಿತ್ತು. ಅದೆಲ್ಲ ತನ್ನ ಹಿಂದಿನವರೇ ಮಾಡಿರುವರೆಂದು ಅಭಿಮಾನದ ಕುರುಡುಂಟಾಗಿದ್ದರೆ, ತೆಪ್ಪಗೆ ಕೂಡಬೇಕಿತ್ತು. ಅಥವಾ ಅಭಿಮಾನದ ಪೊರೆ ತೆರೆಸಿ ನೋಡಿದರೆ, ಈ ಶತಮಾನದವರೆಗೆ ಪ್ರವಹಿಸಿಬಂದಿರುವ ಈ ದ್ವೈತಾದ್ವೈತ ವಾಕ್ಯರ್ಥದ

(ಶ್ರೀ ವ್ಯಾಸತೀರ್ಥಕೃತ) ಶ್ರೀನ್ಯಾಯಾಮೃತ (ದ್ವೈತ)
(ಮಧುಸೂದನಸರಸ್ವತೀಕೃತ) ಅದ್ವೈತಸಿದ್ಧಿ (ಅದ್ವೈತ)
(ವೈಶ್ವನಾಥೀರಾಮಾಚಾರ್ಯಕೃತ) ತರಂಗಿಣಿ (ದ್ವೈತ)
(ಗೌಡಬ್ರಹ್ಮಾನಂದಸರಸ್ವತೀಕೃತ) ಬ್ರಹ್ಮಾನಂದೀ (ಅದ್ವೈತ)
(ವನಮಾಲಿಮಿಶ್ರಕೃತ) ಸೌಗಂಧ್ಯ (ದ್ವೈತ)
(ಅನಂತಕೃಷ್ಣಶಾಸ್ತ್ರಿಕೃತ) ಸೌಗಂಧ್ಯವಿಮರ್ಶ (ಅದ್ವೈತ)
(ಜಾಲಿಹಾಳ ಶ್ರೀನಿವಾಸಾಚಾರ್ಯಕೃತ) ನ್ಯಾಯಾಮೃತಾರ್ಣವ (ದ್ವೈತ)

ಈ ಪರಂಪರೆಯಲ್ಲಿ ಅಂತಿಮವಾಗಿ ನಿಂತಿರುವ ಶ್ರೀನ್ಯಾಯಾಮೃತಾರ್ಣವವನ್ನು ಬರೆದ

ಸಾತ್ವಿಕಗುಣ ಮಂಡಿತರಾದ ಪಂಡಿತರಿಗೂ ದೋಷ ತರದೆ ಕರ್ತವ್ಯವೇ ಆಗುವುದೆಂದು ಇದರಿಂದ ತಿಳಿಯುತ್ತದೆ.) ಈ ಮಾತನ್ನು ಕಂಡಾಗ ಮಾಣಿಕ್ಯ ಮಂಜರಿಯ ಹಿನ್ನೆಲೆ ಕೇವಲ ಮತೀಯ ದುರಭಿಮಾನವೆಂದು ಯಾರಿಗೆ ತೋರಲಾರದು? ಈ ದುರಭಿಮಾನಿ ಜೀವರು ಯಾವ ಮತ ಜನಾಂಗದಲ್ಲಿ ಜನಿಸಿದ್ದರೂ ಅದೇ ಸರಿಯೆಂದು ವಾದಿಸಬೇಕೆಂಬ ಹಠದಿಂದ ಆತ್ಮಪ್ರಜ್ಞೆಯನ್ನೇ ಕಳೆದುಕೊಳ್ಳುವರೇ ಆಗಿರುತ್ತಾರೆ. ಅಭಿಮಾನ ತೊರೆದು ಪ್ರಮಾಣಗಳ ಹಾದಿಯಲ್ಲಿ ಕಾಣಬೇಕಾದ ವೇದ-ವೇದಾಂತಗಳ ವಿಚಾರವನ್ನು, ಜೀವ ಬಂಧಕವಾದ ಈ ತರಹ ಅಭಿಮಾನದ ಪೋಷಣೆಗಾಗಿ ಬಳಸಿದರೆ ಸ್ವಯಂಕೃತಾಪರಾಧವಷ್ಟೆ

ತ್ರಿಮತಸ್ಥ ವಿದ್ವನ್ಮಾನ್ಯರೂ ಮತತ್ರಯದ ವಿದ್ಯಾರ್ಥಿಗಳಿಗೆ ಮೀಮಾಂಸಾಪ್ರಾಧ್ಯಾಪಕರೂ ಆದ ಶ್ರೀ ಚತುರ್ವೇದಿ ರಾಮಚಂದ್ರಾಚಾರ್ಯರು "ವಿಷ್ಣುತತ್ತ್ವ ದೀಪಿಕಾ" ಎಂಬ ಗ್ರಂಥವನ್ನು ಶೋಧಿಸಿ ಪ್ರಕಾಶಿಸಲು ನೆರವಾದಂತೆ, ಈ ಮಾಣಿಕ್ಯ ಮಂಜರಿಯ ಪ್ರಕಾಶನವು ಮತಾಭಿಮಾನದ ಕೆಲಸವಾದರೂ ಸರಿಯಾದುದೆಂದು ಸಮರ್ಥಿಸಿಕೊಳ್ಳುವ ಮಾತೊಂದು ಆ ವಿಜ್ಞಾಪನೆಯಲ್ಲಿ ಬಂದಿದೆ. ಇದನ್ನು ಕಂಡು ಶ್ರೀ ಚತುರ್ವೇದಿ ರಾಮಚಂದ್ರಾಚಾರ್ಯರ ವಿಚಾರವೇನೆಂದು ತಿಳಿಯಲು ಆ ಗ್ರಂಥ ತರಿಸಿ ನೋಡಿದರೆ, ಅದಕ್ಕೂ ಮಾಣಿಕ್ಯಮಂಜರಿಗೂ ಯಾವ ಸಾಮ್ಯತೆಯೂ ಇರುವುದಿಲ್ಲ. ನ್ಯಾಯ-ಮೀಮಾಂಸಾದಿ ಶಾಸ್ತ್ರನ್ಯಾಯಗಳ ಸಂಚಾರದಿಂದ ಗಂಭೀರ ವಿಚಾರಗರ್ಭಿತವಾಗಿ ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುವ ಆ ಗ್ರಂಥಕ್ಕೂ ಕೀಳು ಮತಾಭಿಮಾನದ ಹಿನ್ನೆಲೆಯುಳ್ಳ ಈ ಮಾಣಿಕ್ಯಮಂಜರಿಗೂ ಇರುವ ಅಂತರ ಮತಾಭಿಮಾನದಿಂದ ಕುರುಡಾದವರಿಗೆ ಹೇಗೆ ಕಂಡೀತು?

ಇಷ್ಟಾದರೂ, ಈ ಮಾ-ಮಂಜರಿಯನ್ನು ಸಮರ್ಥಿಸಲು ಘಟನೆಯೊಂದನ್ನು ಪ್ರಸ್ತಾಪಿಸಲಾಗಿದೆ. ಒಮ್ಮೆ ಮಾಧ್ವಮತದ ಒಬ್ಬ ಆಚಾರ್ಯರು ಕೇಳಿದರಂತೆ – "ಸಂಸ್ಕೃತ ಬಲ್ಲವರಾಗಿ ಮಣಿಮಂಜರಿಯನ್ನು ಓದಿಲ್ಲವಾದರೆ ಏನುಪಯೋಗ? ಅಲ್ಲಿ ಶಂಕರಾಚಾರ್ಯರ ಸಮಗ್ರಪರಿಚಯವಿದೆಯೆಂದು" ಹೇಳಿದರಂತೆ. ಆಗ ಮನದೊಳಗೆ ಕಸಿವಿಸಿಕೊಂಡ ಈ ವಿಜ್ಞಾಪನ ಮಾಡುವ ವ್ಯಕ್ತಿಗೆ ಶಂಕರಭಗವತ್ಪಾದರ ನಿಂದೆಯನ್ನು ತೊಳೆಯಬೇಕೆಂದು ಮನಸ್ಸಾಗುತ್ತಿದ್ದಂತೆ, ಒಂದು ವಾರದೊಳಗೇ ಈ ಮಾಣಿಕ್ಯಮಂಜರಿಯು ಕಾಕತಾಳೀಯವಾಗಿ ದೊರೆಯಿತಂತೆ. ಅದನ್ನು ಕಂಡಮೇಲೆ ಮಾಧ್ವರಿಗೆ ಆ ವ್ಯಕ್ತಿ ಹೀಗೆ ಹೇಳುತ್ತಾನಂತೆ :– "ಸಂಸ್ಕೃತವನ್ನು ಕಲಿತು ಮಾಣಿಕ್ಯ ಮಂಜರಿಯನ್ನು ತಿಳಿದಿಲ್ಲವಾದರೆ ಅದರಿಂದ ಏನು ಉಪಯೋಗ? ಇಲ್ಲಿ ಪೂರ್ಣಪ್ರಜ್ಞರ ಪೂರ್ಣಪರಿಚಯವಿದೆ" ಎಂದು.

ಮಾಣಿಕ್ಯ ಮಂಜರಿಯನ್ನು ಪ್ರಕಾಶಿಸುವ ಈ ಮಹಾಶಯನ ಈ ಮಾತುಗಳನ್ನು ನೋಡಿದಾಗ, ಇವನ ಸ್ನೇಹಿತ ಮಾಧ್ವ ಆಚಾರಿಯು ಇವನಿಗಾಡಿದ ಚುಚ್ಚು ಮಾತು ಹಾಗೂ ಅದಕ್ಕೆ ಪ್ರತಿಯಾಗಿ ಇವನಿಗೂ ಚುಚ್ಚು ಮಾತಾಡಲು ಈ ಮಾ-ಮಂಜರಿ ದೊರೆತ ಬಗೆಯ ಕಥೆ

ನಿಜವಿರಲಿ-ಸುಳ್ಳಾಗಿರಲಿ, ಈ ಮಾ-ಮಂಜರಿಯ ಪ್ರಕಾಶನದ ಹಿನ್ನೆಲೆ ದ್ವೇಷಾಸೂಯಗಳ ಪರಾಕಾಷ್ಠೆಯೆಂಬುದಂತೂ ನಿಜವೇ ಆಗಿರುತ್ತದೆ. ಸಂಸ್ಕೃತವೇ ಗೊತ್ತಿಲ್ಲವೆಂದು ಆ ಮಾಧ್ವ ಸ್ನೇಹಿತನನ್ನು ಮೂದಲಿಸುವ ಈ ವಿಜ್ಞಾಪನಕಾರನು, ಜ್ಞಾನವಿಲ್ಲದೆ ಮತಾಭಿಮಾನದಿಂದ ಅವನಾಡಿದ ಮಾತಿಗೆ ತಲೆಕೆಡಿಸಿಕೊಂಡನೆಂದರೆ, ಅವನಿಗೂ ಇವನಿಗೂ ಏನು ಅಂತರ? ಅವ ನಂತೆ ಇವನೂ ಚುಚ್ಚುಮಾತಾಡಬೇಕೆಂದು ಬಯಸಿ ಅದಕ್ಕೆ ಈ ಮಾ-ಮಂಜರಿ ದೊರೆಯಿತೆಂದು ಉಬ್ಬಿದರೆ, ಈ ಮಾ-ಮಂಜರಿಯ ಉಪಯೋಗ ಏನೆಂದು ಹೆಚ್ಚು ಹೇಳುವುದೇನಿದೆ?

ನಿಜವಾಗಿ ಆತ ವಿವೇಕಿಯೇ ಆಗಿದ್ದಲ್ಲಿ ಈ ಸಂದರ್ಭದಲ್ಲಿ ಆರಿಸಿಕೊಳ್ಳಬೇಕಾದ ದಾರಿ ಬೇರೆಯೇ ಆಗಬೇಕಿತ್ತು. ತನ್ನ ಮತಾಚಾರ್ಯರಾದ ಶಂಕರಾಚಾರ್ಯರ ಬಗ್ಗೆ ಮಣಿಮಂಜರಿಯಲ್ಲಿ ಬಂದ ವಿಚಾರದಿಂದ ಮನನೊಂದುವ ಅಭಿಮಾನಿಯಾಗಿದ್ದರೆ, ಶಂಕರರ ನೈಜ ಜೀವನಕ್ಕೆ ಆಧಾರವಾಗುವ ಮಣಿಮಂಜರಿಗಿಂತಲೂ ಪ್ರಾಚೀನವಾದ ಗ್ರಂಥದ ಅನ್ವೇಷಣೆ ಮಾಡಬೇಕಿತ್ತು. ಐತಿಹಾಸಿಕ ಪ್ರಜ್ಞೆಯಿಂದ ವರ್ತಿಸಿ ವಿಮರ್ಶಿಸಬೇಕಿತ್ತು. ಮಧ್ವಾಚಾರ್ಯರನ್ನು ಬೈದಮಾತ್ರಕ್ಕೆ ಶಂಕರಾಚಾರ್ಯರ ನಿಂದೆ ತೊಳೆದು ಹೋಗದೆಂದು ಅರ್ಥಮಾಡಿಕೊಳ್ಳಬೇಕಿತ್ತು.

ಶಾಂಕರಚರಿತೆಗೆ ಐತಿಹಾಸಿಕವಾಗಿ ಖಚಿತ ಮಾಹಿತಿ ನೀಡುವ ಗ್ರಂಥಗಳು ಸಿಗದೆ ಒದ್ದಾಡುವ ಸಂದರ್ಭವಾದರೆ, ಶಾಂಕರ ಮತದ ನಿರ್ದುಷ್ಟತೆಯನ್ನು ಸಮರ್ಥಿಸಿ, ಶಾಂಕರ ವಿಚಾರದಲ್ಲಿ ಕಳಂಕವಿಲ್ಲವಾದ್ದರಿಂದ ಅವರು ದೇವತಾಸ್ವರೂಪರೆಂದು ಸಮರ್ಥಿಸಬೇಕಾಗಿತ್ತು. ದುರ್ಗಮವಾದ ಈ ಕೆಲಸಕ್ಕೆ, ಮಾಧ್ವೀಯ ಮೌಲಿಕಗ್ರಂಥಗಳಾದ ನ್ಯಾಯಸುಧಾ-ನ್ಯಾಯಾ ಮೃತ-ಚಂದ್ರಿಕಾ ಇತ್ಯಾದಿಗಳಲ್ಲಿ ಬರುವ ಅದ್ವೈತಮತಖಂಡನಾತ್ಮಕ ವಾಕ್ಯಾರ್ಥಗಳಿಗೆ ಉತ್ತರ ನೀಡುವ ಸಾಹಸ ಮಾಡಬೇಕಿತ್ತು. ಅದೆಲ್ಲ ತನ್ನ ಹಿಂದಿನವರೇ ಮಾಡಿರುವರೆಂದು ಅಭಿಮಾನದ ಕುರುಡುಂಟಾಗಿದ್ದರೆ, ತೆಪ್ಪಗೆ ಕೂಡಬೇಕಿತ್ತು. ಅಥವಾ ಅಭಿಮಾನದ ಪೊರೆ ತೆರೆಸಿ ನೋಡಿದರೆ, ಈ ಶತಮಾನದವರೆಗೆ ಪ್ರವಹಿಸಿಬಂದಿರುವ ಈ ದ್ವೈತಾದ್ವೈತ ವಾಕ್ಯಾರ್ಥದ

| | | |
|---|---|---|
| (ಶ್ರೀ ವ್ಯಾಸತೀರ್ಥಕೃತ) | ಶ್ರೀನ್ಯಾಯಾಮೃತ | (ದ್ವೈತ) |
| (ಮಧುಸೂದನಸರಸ್ವತೀಕೃತ) | ಅದ್ವೈತಸಿದ್ಧಿ | (ಅದ್ವೈತ) |
| (ವೈಶ್ವನಾಥೀರಾಮಾಚಾರ್ಯಕೃತ) | ತರಂಗಿಣಿ | (ದ್ವೈತ) |
| (ಗೌಡಬ್ರಹ್ಮಾನಂದಸರಸ್ವತೀಕೃತ) | ಬ್ರಹ್ಮಾನಂದೀ | (ಅದ್ವೈತ) |
| (ವನಮಾಲಿಮಿಶ್ರಕೃತ) | ಸೌಗಂಧ್ಯ | (ದ್ವೈತ) |
| (ಅನಂತಕೃಷ್ಣಶಾಸ್ತ್ರಿಕೃತ) | ಸೌಗಂಧ್ಯವಿಮರ್ಶ | (ಅದ್ವೈತ) |
| (ಜಾಲಿಹಾಳ ಶ್ರೀನಿವಾಸಾಚಾರ್ಯಕೃತ) | ನ್ಯಾಯಾಮೃತಾರ್ಣವ | (ದ್ವೈತ) |

ಈ ಪರಂಪರೆಯಲ್ಲಿ ಅಂತಿಮವಾಗಿ ನಿಂತಿರುವ ಶ್ರೀನ್ಯಾಯಾಮೃತಾರ್ಣವವನ್ನು ಬರೆದ

ಪಂಡಿತರಾಜರಾದ, ಧಾರವಾಡದಲ್ಲಿಯೇ ಅಖಂಡ ಪಾಠ-ಪ್ರವಚನ ನಿಷ್ಠರಾಗಿ ಋಷಿ ಜೀವನ ಮಾಡಿದ, ಪರಮಪೂಜ್ಯ ಶ್ರೀ ಜಾಲಿಹಾಳ ಶ್ರೀನಿವಾಸಾಚಾರ್ಯರ ಗ್ರಂಥಕ್ಕೆ ಅಲ್ಲಿ ಬಂದಿರುವ ಅದ್ವೈತಮತದ ಖಂಡನೆಗೆ ಉತ್ತರಿಸುವ ಗ್ರಂಥವನ್ನು ಹುಡುಕಬೇಕಿತ್ತು. ಅದನ್ನು ಪ್ರಕಾಶಪಡಿಸ ಬೇಕಿತ್ತು. ಈ ಕಾಯಕವನ್ನು ಬಿಟ್ಟು ಯಾರೋ ಒಬ್ಬ ಮಾಧ್ವಸ್ನೇಹಿತ ತನಗಾಡಿದ ಒಂದು ಚುಚ್ಚುಮಾತಿಗೆ ತಾನೂ ಹಾಗೆ ಚುಚ್ಚು ಮಾತಾಡಬೇಕೆಂದು ಹವಣಿಸಿ, ಮಾಣಿಕ್ಯಮಂಜರಿಯಂಥ ಸತ್ವಹೀನ ಕೃತಿಗೆ ಶರಣಾದ ಈ ಪ್ರಕಾಶನ ದೀಕ್ಷಿತ ವ್ಯಕ್ತಿಯ ಮಾತು ಯಾವ ರೀತಿಯಿಂದ ಸಮರ್ಥನೀಯವೆನಿಸುತ್ತದೆ?

ಇನ್ನು ಆ ಮಾಧ್ವ ಸ್ನೇಹಿತ ಇವನಿಗಾಡಿದ ಚುಚ್ಚು ಮಾತಿನಲ್ಲಿ ಗಮನಿಸಬೇಕಾದ ಅಂಶವೊಂದಿದೆ. ಶಾಂಕರ ಜೀವನದ ಬಗ್ಗೆ ಅಧಿಕೃತಗ್ರಂಥವಿಲ್ಲವಾದ್ದರಿಂದ ಅದರ ಬಗ್ಗೆ ತಿಳಿಯುವಾಗ ಮಣಿಮಂಜರಿಯ ಅವಶ್ಯಕತೆ ಇರುವುದೆಂಬ ಸೂಕ್ಷ್ಮವನ್ನು ಈ ಮಾ. ಮಂಜರೀ ಪ್ರಕಾಶಕನು ತಿಳಿಯಬೇಕಷ್ಟೆ ಆದರೆ ಇವನ ಚುಚ್ಚುನುಡಿಯಲ್ಲಿ ಆ ಸೂಕ್ಷ್ಮವಿಲ್ಲ. ಶ್ರೀಮದಾ ಚಾರ್ಯರ ಕಾಲದಲ್ಲೇ ರಚಿತವಾಗಿ ಪ್ರಸಿದ್ಧವಾದ ಸುಮಧ್ವವಿಜಯಾದಿ ಐತಿಹಾಸಿಕ ಮೌಲ್ಯವುಳ್ಳ ಗ್ರಂಥಗಳಿಂದ ಪೂರ್ಣಪ್ರಜ್ಞರ ಪೂರ್ಣ ಪರಿಚಯ ಪಡೆದಿರುವ ಆ ಮಾಧ್ವಸ್ನೇಹಿತನಿಗೆ ಇತ್ತೀಚಿನ ರಘುನಾಥಸೂರಿಯ ಮಾ. ಮಂಜರಿ ಅನುಪಯುಕ್ತವೆಂದು ಸ್ಪಷ್ಟವಷ್ಟೆ ಆದ್ದರಿಂದ ಚುಚ್ಚುಮಾತಿಗೆ ಪ್ರತಿಯಾಗಿ ಚುಚ್ಚು ಮಾತಾಡುವಂತೆ ತಾ ಆರಂಭಿಸಿದ ಪಂದ್ಯದಲ್ಲಿ ಮಾ-ಮಂ-ಪ್ರಕಾಶಕನು ಬಳಲಿ ಬೆಂಡಾದ ಬಗೆ, ಆ ಆಗ್ರಹಿ ಮಾಧ್ವಸ್ನೇಹಿತನಿಗೆ ನಗೆ ತರಿಸಿರಬೇಕು. ಅದಕ್ಕೇ ಅವನು ಇದಕ್ಕೆ ಪ್ರತಿಯಾಗಿ ಏನೂ ಹೇಳದೆ ಸುಮ್ಮನಿರಬೇಕೆಂದು ಊಹಿಸಿ ಈ ವಿಚಾರ ಸಾಕು ಮಾಡೋಣ.

## ಮಾಣಿಕ್ಯ ಮಂಜರಿಯ ಒಳಗೇನಿದೆ?

4 ಸರ್ಗಗಳಿಂದ ಕೂಡಿದ ವ್ಯಾಖ್ಯಾಭೂಯಿಷ್ಠ ಈ ಕೃತಿಯಲ್ಲಿ ಶಿವ ಸರ್ವೋತ್ತಮತ್ವ ಶಂಕರಚರಿತ್ರೆಯ ವೈಭವೀಕರಣ. ಮಧ್ವಚರಿತೆಯ ವಿಕೃತ ಚಿತ್ರಣ - ವಿದ್ಯಾರಣ್ಯ ಚರಿತೆಯು ಎಂದು ನಾಕು ವಿಷಯಗಳು ಸ್ಥೂಲವಾಗಿ ಬಂದಿರುತ್ತವೆ. ಈ ನಾಕಕ್ಕೆ ಸುತ್ತ ಮುತ್ತ ಅನೇಕ ಸಂಗತಿಗಳು ಜೊತೆಯಾಗಿವೆ. ಅವುಗಳಲ್ಲಿ ತಪ್ತಮುದ್ರಾಧಾರಣ ನಿಷೇಧ - ಅಕ್ಷೋಭ್ಯತೀರ್ಥರ ನಿಂದನೆ - ಪುರಾಣಗಳಲ್ಲಿ ಸಾತ್ವಿಕ-ತಾಮಸಾದಿ ವಿಭಾಗಖಂಡನ - ಅಕ್ಷೋಭ್ಯತೀರ್ಥರು ವಿದ್ಯಾರಣ್ಯನನ್ನು ಸೋಲಿಸಿದ ಘಟನೆಯ ವಿಕೃತ ಚಿತ್ರಣ ಇತ್ಯಾದಿಗಳು ಪ್ರಮುಖ ವಿಷಯ ಗಳಾಗಿವೆ. ಹೆಜ್ಜೆ ಹೆಜ್ಜೆಗೆ ಪುರಾಣವಾಕ್ಯಗಳ ಉದಾಹರಣೆ ಮಾಡುತ್ತ ಇಲ್ಲಿರುವ ವಿಷಯವೆಲ್ಲ ಪ್ರಾಮಾಣಿಕವೆಂಬ ಭ್ರಮೆ ಬರುವಂತೆ ಈ ಗ್ರಂಥ ರಚನೆಯಾಗಿದೆ. ಮಣಿಮಂಜರಿಯಲ್ಲಿ ಶಂಕರಾಚಾರ್ಯರ ಬಗ್ಗೆ ಕಾಣುವ ಸಂಗತಿಗಳನ್ನೆಲ್ಲ ಇಲ್ಲಿ ಮಧ್ವಾಚಾರ್ಯರಿಗೆ ಅನ್ವಯಿಸುವ ದುರಭಿಮಾನಕ್ಕೆ ಈ ಗ್ರಂಥ ದೊಡ್ಡ ಆಸರೆಯಾಗಿದೆ. ಶಿವ ಸರ್ವೋತ್ತಮತೆ ಸಮರ್ಥಿಸುವ ಆಗ್ರಹದಲ್ಲಿ ವಿಷ್ಣುವನ್ನು ಕೀಳಾಗಿ ಕಾಣುವಂತೆ ಚಿತ್ರಿಸಲಾಗಿದೆ. ಹೀಗೆ ಹರಿ-ವಾಯು ಇವರೀರ್ವರ

ನಿಂದಾತ್ಮಕವಾದ ಈ ಕೃತಿಯನ್ನು ಓದಿದರೆ ಮಹಾ ಪಾಪವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಆದರೆ ಕಥಂಚಿತ್ ಕುತೂಹಲದಿಂದ ಓದಿಬಿಟ್ಟರೆ, ಆಗ ಈ ಪಾಪ ಪರಿಹಾರಹೇಗೆಂದು ಆಲೋಚಿಸುವ ಸಾತ್ವಿಕ ಜನರ ನಿರೀಕ್ಷೆಗೆ ಮೂರ್ತಿಮಂತವಾಗಿ ಬಂದು ಅನುಗ್ರಹಿಸುವ ದಿವ್ಯ ಗ್ರಂಥ ಪ್ರಕೃತ ಪ್ರಕಾಶಿತವಾಗುತ್ತಿರುವ ಮಣಿಮಂಜರೀ ವೈಭವವು.

## ಮಣಿಮಂಜರೀ ವೈಭವದ ಆವಶ್ಯಕತೆ

ಯದ್ಯಪಿ ದ್ವೇಷಾಸೂಯಗಳ ಮೂಲಕವಾದ ಈ ಮಾ-ಮಂಜರಿಯು ಉಪೇಕ್ಷೆಗೆ ಅರ್ಹವಾದ್ದರಿಂದ, ಅದನ್ನು ವಿಮರ್ಶಿಸಿ ಮಣಿಮಂಜರಿಯ ಮಹತ್ವ ಪ್ರತಿಪಾದಿಸಲು ಪ್ರವೃತ್ತವಾದ ಈ ವೈಭವಗ್ರಂಥ ಅನವಶ್ಯಕವೆಂದೇ ತೋರುತ್ತದೆ. ಪ್ರಾಚೀನಕಾಲದಲ್ಲಿದ್ದಂತೆ ಪ್ರಾಮಾಣಿಕ ವಿಷಯಗಳನ್ನು ತಿಳಿಯಬೇಕು ಹಾಗು ಒಪ್ಪಬೇಕೆಂಬ ಕಳಕಳಿ - ಆತ್ಮೋದ್ಧಾರಕ ವಿಚಾರ ಇಂದು ಕಾಣುತ್ತಿಲ್ಲ. ಈ ಕಳಕಳಿ ಇದ್ದುದರಿಂದ ಹಿಂದೆ ಸಾವಿರಾರು ಸಾತ್ವಿಕ ಸ್ಮಾರ್ತರೂ ಮಾಧ್ವರಾಗಿ ಬಾಳು ಆರಂಭಿಸಿದ್ದರಷ್ಟೆ ಆದರೆ ಅಪ್ಪಯ್ಯದೀಕ್ಷಿತರ ಕಾಲಕ್ಕೆ ಆರಂಭಗೊಂಡ ಅಂಧಾಭಿಮಾನದ ಪರಂಪರೆ ಇಂದು ಬೇರೂರಿರುವ ಹೆಮ್ಮರವಾಗಿರುವಾಗ, ಪರಿವರ್ತನೆಯ ಉದ್ದೇಶದಿಂದ ಖಂಡನ ಮಂಡನ ಗ್ರಂಥರಚನೆ ಕೇವಲ ಕನಸಾಗುತ್ತದೆ. ಸ್ವಾರ್ಥಪಥವನ್ನು ತೊರೆದು ಮಾಧ್ವನಾಗಿ ಬಾಳುತ್ತಿರುವ ಇಂದಿನ ಯಾವ`ಮಾಧ್ವನೂ, ಮಾಧ್ವಮತ ತೊರೆವ ಭಯ ಈ ಮಾ-ಮಂಜರಿಯಿಂದ ಆಗುವುದಿಲ್ಲವಾದ್ದರಿಂದ ಅದನ್ನು ತಪ್ಪಿಸುವ ಕೆಲಸಕ್ಕೂ ಇದು ಬೇಕಾಗಿಲ್ಲ. ಹಾಗಾದರೆ ಯಾರ ಪ್ರೀತಿಗಾಗಿ ಈ ಮಣಿಮಂಜರೀವೈಭವ ಪ್ರವೃತ್ತವಾಗಿದೆ? ಎಂದರೆ........

1. ಶ್ರೀ ಹರಿ-ವಾಯು-ಗುರುಗಳ ಪ್ರೀತಿಗಾಗಿ,
2. ನೊಂದ ಸಾಧುಜನರ ಸಂತಸಕ್ಕಾಗಿ,
3. ಮುಂದಿನ ಜನಾಂಗಕ್ಕೆ ನೀತಿಗಾಗಿ,

ಈ ಮಣಿಮಂಜರೀವೈಭವದ ಆರಂಭ ಆವಶ್ಯಕವಾಗಿದೆ. ಶ್ರೀಹರಿ-ವಾಯು-ಗುರುಗಳ ನಿಂದೆಯನ್ನು ಯಾರಾದರೂ ಮಾಡಿದರೆ, ಅದಕ್ಕೆ ಪ್ರತಿಯಾಗಿ ಉತ್ತರಿಸುವುದು ಎಲ್ಲ ಸಾಧಕರ ಕರ್ತವ್ಯವಾಗಿದೆಯಷ್ಟೆ "ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ" ಎಂಬ ವಿಧಿಯ ಅನುಗುಣವಾಗಿ ಈ ಗ್ರಂಥ ಪ್ರವೃತ್ತಿಯು, ಶ್ರೀ ಹರಿ-ವಾಯುಗುರುಗಳ ಪ್ರೀತಿಗೆ ಕಾರಣವಷ್ಟೆ ಇದಲ್ಲದೆ, ಶಾಸ್ತ್ರೀಯ ವಿಚಾರ ಪ್ರಜ್ಞೆ ಹೊಂದಲು ಅಸಮರ್ಥರಾದ, ಶ್ರೀಹರಿ-ವಾಯು-ಗುರುಗಳಲ್ಲಿ ಭಕ್ತಿಸಂಪನ್ನರಾದ ಸಜ್ಜನರು, ಆ ಮಾ-ಮಂಜರಿಯ ಕೆಲಸವನ್ನು ನೋಡಿ ನೊಂದಿರುವುದಕ್ಕೆ ಪರಿಹಾರವಾಗಿ ಈ ವೈಭವ ಗ್ರಂಥ ಆವಶ್ಯಕವಾಗಿದೆ. ಪ್ರತಿಯೊಂದು ಪುಟದ ತುಂಬ 'ಆ ಪುರಾಣ ಈ ಪುರಾಣ' ಎಂದು ಅನೇಕ ಅನುಷ್ಟುಪ್ ಶ್ಲೋಕಗಳನ್ನು ತುಂಬಿಸಿ,

ಶ್ರೀಹರಿವಾಯುಗಳ ನಿಂದೆಗೆ ಮುಂದಾದ ಶ್ರೀ ಮಾ-ಮಂಜರಿಯನ್ನು ಕಂಡು ಏನೂ ಗೊತ್ತಿರದ ಸಾತ್ವಿಕರ ಮನಸ್ಸು ಕದಡುವುದು ಸಹಜವಷ್ಟೆ ಅದಕ್ಕೇ ಆ ಮಾ-ಮಂ. ಕೆಲಸದಲ್ಲಿ ಅನುಪಪನ್ನತೆಯನ್ನು ತೋರಿಸಿ ಆ ಪುರಾಣವಾಕ್ಯಗಳ ಸತ್ಯಾಸತ್ಯತೆಯನ್ನು ವಿಮರ್ಶಿಸುವ ಈ ವೈಭವಗ್ರಂಥವು ಅನವಶ್ಯಕವೆಂದು ಯಾರಿಗೆ ಅನಿಸಬಹುದು? ಇದೆಲ್ಲಕ್ಕಿಂತ ಮಿಗಿಲಾಗಿ, ಅಪ್ರಾಮಾಣಿಕವಾದ ಒಂದು ಕೃತಿ ಬೆಳಕು ಕಾಣುತ್ತಿದ್ದಂತೆ ಆ ಕಾಲದಲ್ಲಿಯೇ ಅದರ ಪರಾಮರ್ಶೆ ಆಗದಿದ್ದರೆ, ಕಾಲವಿಲಂಬದಿಂದ ಮುಂದೆ ಅಲ್ಲಿರುವ ವಿಷಯವೇ ಪ್ರಾಮಾಣಿಕವೆಂಬಂತೆ ಭಾಸವಾಗಿ, ಅಧ್ಯಯನಶೀಲ ಸಮಾಜಕ್ಕೆ ಒಂದು ದೊಡ್ಡ ಪೆಟ್ಟಾಗುತ್ತದೆ. ಅದು ತಪ್ಪಿಸಲು ಮಾಣಿಕ್ಯ ಮಂಜರಿಯನ್ನು ವಿಮರ್ಶಿಸುವ ಈ ಮಣಿಮಂಜರೀವೈಭವವು ಹಾಗು ಅದರ ಪ್ರಕಾಶನವು ಎಲ್ಲ ರೀತಿಯಿಂದಲೂ ಸಮರ್ಥನೀಯವಾಗಿದೆ.

## ಮಾಧ್ವರು ಯಾರನ್ನೂ ದ್ವೇಷಿಸುವುದಿಲ್ಲ

ಮಾ-ಮಂ-ಪ್ರಕಾಶಕನೂ ವಿಜ್ಞಾಪನೆಯಲ್ಲಿ "ಪ್ರಾಯೇಣ ಮಾಧ್ವಾಃ ಸ್ವಮತಾಭಿಮಾನೇನ ಸ್ಮಾರ್ತಾನ್ ದ್ವಿಷಂತಿ । ದ್ವೇಷೇಣ ಚ ಭಾಷಣಾದಾವಧಿಕ್ಷಿಪಂತಿ" ಎಂಬುದಾಗಿ (ಪ್ರಾಯಃ ಮಾಧ್ವರು ತಮ್ಮ ಮತದ ಅಭಿಮಾನದಿಂದ ಸ್ಮಾರ್ತರನ್ನು ದ್ವೇಷಿಸುತ್ತಾರೆ. ದ್ವೇಷದಿಂದಲೇ ಭಾಷಣಾದಿಗಳಲ್ಲಿ ಬಯ್ಯುತ್ತಾರೆಂದು) ಒಂದು ಮಾತು ಬಂದಿದೆ. ಆದರೆ ಸಾತ್ವಿಕ ಯಜ್ಞ-ಯಾಗನಿಷ್ಠರಾಗಿ ಪಶು-ಪಕ್ಷಿ-ಪ್ರಾಣಿಗಳನ್ನೂ ಹಿಂಸಿಸದೆ ಅವುಗಳ ಜೊತೆಗೂ ಸೌಹಾರ್ದದಿಂದ ಬಾಳುವ ಮಾಧ್ವರು ಸ್ಮಾರ್ತರನ್ನು ಮಾತ್ರ ದ್ವೇಷಿಸುವರೆಂಬ ಮಾತು ಎಷ್ಟು ಸರಿಯಾದೀತು? ಜೀವ ತ್ರೈವಿಧ್ಯವಾದಿಗಳಾದ ಮಾಧ್ವರು ತಮ್ಮ ವಿಚಾರವನ್ನು ಮತ್ತೊಬ್ಬರು ಒಪ್ಪದಿದ್ದರೆ ಮನಸ್ಸಿನಲ್ಲಿ ವಿಚಲಿತರಾಗುವುದಿಲ್ಲ. ಅದು ಆ ಜೀವನ ಸ್ವರೂಪವೆಂದು ಸುಮ್ಮನಾಗುತ್ತಾರೆ. ಆದರೆ ಈ ವಾದವನ್ನು ಒಪ್ಪದಿರುವ ಜೀವತ್ರೈವಿಧ್ಯ ಸ್ಮಾರ್ತರಿಗೇ ಈ ರೀತಿ ಮಾಧ್ವದ್ವೇಷವಿರಬೇಕಷ್ಟೆ ಅದಕ್ಕೆ ಮಾ-ಮಂ-ಪ್ರಕಾಶನಾದಿಗಳೇ ಸಾಕ್ಷಿಯಾಗಿದೆಯಷ್ಟೆ ವಾಸ್ತವವೇನೆಂದರೆ, ಸ್ಮಾರ್ತರಿಗೆ ಹಿಡಿಸದಿರುವ ಪಂಡಿತಾಚಾರ್ಯರ ವಾಯುಸ್ತುತಿ-ಮಧ್ವ ವಿಜಯ-ಮಣಿಮಂಜರಿಗಳು ಎಲ್ಲ ಮಾಧ್ವರ ಎದೆಯ ಮೇಲೆ ಯಜ್ಞೋಪವೀತದಂತೆ ಮಾನ್ಯವಾಗಿ ಪವಿತ್ರಸ್ಥಾನ ಪಡೆದುದನ್ನು ನೋಡಿ ಈ ತರಹದ ಸ್ಮಾರ್ತರ ಆಕ್ಷೇಪ ಹುಟ್ಟಿದೆ. ಆದರೆ ಪಂಡಿತಾಚಾರ್ಯರ ಗ್ರಂಥಗಳನ್ನು ಐತಿಹಾಸಿಕ ಪ್ರಜ್ಞೆಯಿಂದ ಅರ್ಥಮಾಡಿಕೊಂಡಾಗ ಈ ಆಕ್ಷೇಪಗಳೆಲ್ಲ ತಾನಾಗಿ ದೂರವಾಗುವುದರಿಂದ ಈ ಆಕ್ಷೇಪಗಳಲ್ಲಿ ಯಾವುದೇ ಅರ್ಥವಿರುವು ದಿಲ್ಲವೆಂದು, ಮಾಧ್ವಸ್ನೇಹಿತರು ಇದಕ್ಕೆ ಪ್ರತಿಯಾಗಿ ಹೆಚ್ಚೇನೂ ಹೇಳಲು ಬಯಸುವುದಿಲ್ಲ. ಸ್ಮಾರ್ತರು ಹೇಳುವ ಶಿವಸರ್ವೋತ್ತಮತ್ವ-ಜಗನ್ಮಿಥ್ಯಾತ್ವ-ನಿರ್ಗುಣಬ್ರಹ್ಮವಾದ - ವೇದಗಳ ಅತತ್ವಾವೇದಕತ್ವ - ಇತ್ಯಾದಿ ವಿಷಯಗಳನ್ನು ಖಂಡಿಸುವುದೇ ಸ್ಮಾರ್ತದ್ವೇಷವೆಂದಾದರೆ, ಇದು

ವಿಚಾರವಂತರಿಗೆ ದೋಷವಾಗದೆ ಭೂಷಣವೇ ಆಗುವುದರಿಂದ, ಈ ಭೂಷಣಗಳಿಂದ ಅಲಂಕೃತವಾದ ಮಣಿಮಂಜರೀ ವೈಭವವನ್ನು ದ್ವೇಷಾಸೂಯಾದಿ ದೋಷಗಳ ಹಿನ್ನೆಲೆಯುಳ್ಳ ಮಾ-ಮಂಜರಿಗೆ ವಿಲಕ್ಷಣವಾಗಿ ಎಲ್ಲ ಸಹೃದಯರೂ ಮನಗಾಣುತ್ತ ಈ ವೈಭವಗ್ರಂಥದ ವಿಚಾರವನ್ನು ತಿಳಿಯಬೇಕೆಂದು ಹಂಬಲಿಸುವುದನ್ನು ಕಂಡು, ಅದರ ವಿಚಾರವನ್ನು ಈಗ ಯಥಾಮತಿ ಸಾದರಪಡಿಸುತ್ತೇನೆ.

## ಮಾ-ಮಂಜರಿಗೆ ಮಣಿಮಂಜರಿಯಿಂದ ಉತ್ತರ!

ಮಾಣಿಕ್ಯ ಮಂಜರಿಯ ವಿಷಯಗಳಿಗೆ ಅದಕ್ಕಿಂತ ಪೂರ್ವವಾದ ಮಣಿಮಂಜರಿಯ ಮಂಗಲಪದ್ಯವೇ ಉತ್ತರವೆಂದು ಪ್ರತಿಪಾದಿಸುವ ರೀತಿಯಲ್ಲಿ ಈ ವೈಭವಗ್ರಂಥವು ಆರಂಭಗೊಂಡಿರುವುದು ಎಲ್ಲರಿಗೂ ಕುತೂಹಲವಾಗುವಂತಿದೆ. ಮುಂದಿನ ಗ್ರಂಥಕ್ಕೆ ಹಿಂದಿನ ಗ್ರಂಥವೇ ಹೀಗೆ ಉತ್ತರವಾದೀತೆಂದು ಪ್ರಶ್ನೆ ಬರುವಂತೆ ಈ ವಿಚಾರ ತೋರುತ್ತಿದೆ.

ಅದಕ್ಕೆ ಉತ್ತರವಾಗಿ,

**ವಂದೇ ಗೋವಿಂದಮಾನಂದ ಜ್ಞಾನದೇಹಂ ಪತಿಂ ಶ್ರಿಯಃ ||**
**ಶ್ರೀಮದಾನಂದತೀರ್ಥಾರ್ಯವಲ್ಲಭಂ ಪರಮಕ್ಷರಮ್ ||**

ಎಂಬ ಶ್ಲೋಕಕ್ಕೆ ಅನೇಕರೀತಿಯ ವ್ಯಾಖ್ಯಾನ ಪ್ರವೃತ್ತಿಯು ಇಲ್ಲಿ ವಿಜೃಂಭಿಸಿ ಬಂದಿದೆ. ವ್ಯಾಖ್ಯಾನದ ವಿಷಯವೆಲ್ಲ ಪಂಡಿತಾಚಾರ್ಯರ ಸಮ್ಮತವಾದ್ದರಿಂದ, ಈ ಮಾ-ಮಂಜರಿಗೆ ಮಣಿಮಂಜರಿಯೇ ಖಂಡನವೆಂಬ ರೀತಿಯಲ್ಲಿ ಇಲ್ಲಿ ವೈಭವ ಗ್ರಂಥದ ಪ್ರವೃತ್ತಿಯು ಸಹೃದಯರಿಗೆ ಚಮತ್ಕಾರ ಆಧಾಯಕ ಸಂಗತಿಯಾಗಿದೆ. ನೇರವಾಗಿ ಖಂಡಿಸದೆ ಮಣಿಮಂಜರಿಯ ವ್ಯಾಖ್ಯಾನವನ್ನು ಮಾಡಿ ಮಣಿಮಂಜರಿಯಿಂದಲೇ ಮಾ-ಮಂಜರಿ ಖಂಡನೆಯೆಂದು ನಿರೂಪಿಸಿದ್ದು ಏಕೆಂದರೆ? ಮಾ-ಮಂಜರಿಯ ವಿಷಯದಲ್ಲಿ ಯಾವುದೇ ನಾವೀನ್ಯವಿಲ್ಲವೆಂದೂ, ಅದೆಲ್ಲವೂ ಪೂರ್ವಿಕರಿಂದಲೇ ಪರಾಮೃಷ್ಟವಾದ ಸಣ್ಣ ವಿಷಯವೆಂಬ ವಾಸ್ತವವನ್ನು ಮರೆಯದಿರಲು ವೈಭವ ಗ್ರಂಥದ ಈ ಪ್ರವೃತ್ತಿ ಉಚಿತವೆನಿಸುತ್ತದೆ.

## ವೈಭವದ ವಿಷಯ ಪ್ರತಿಪಾದನೆ

ಈ ವೈಭವ ಗ್ರಂಥದ ವಿಷಯ ನಿರೂಪಣೆ ವೈಭವೋಪೇತವಾಗಿದೆ. ಮೊದಲು ವೇದದ ತಾತ್ಪರ್ಯವೇನೆಂದು ಪ್ರಶ್ನೆ ತೆಗೆದುಕೊಂಡು, ಗೋ = ವೇದಗಳಿಂದ, ವಿಂದ = ಪ್ರತಿಪಾದ್ಯನಾಗಿ ಗೋವಿಂದನೆನಿಸಿದ ಶ್ರೀಹರಿಯ ಸರ್ವೋತ್ತಮತ್ವವೇ ಸಕಲ ಶ್ರುತಿಸಿದ್ಧಾಂತವೆಂದು ಸಮರ್ಥಿಸಿ, ತನ್ಮೂಲಕವಾಗಿ ಮುಂದಿನ ಸಕಲವಿಚಾರಗಳನ್ನು ಹಂತಹಂತವಾಗಿ ಬೆಳೆಸಿದ ರೀತಿ ಹೃದಯಂಗಮ

ವಾಗಿದೆ. ವಿಷ್ಣುವೇ ವೇದಪ್ರತಿಪಾದ್ಯ ಪರದೇವತೆಯೆಂದು ಸಿದ್ಧವಾದಮೇಲೆ ಶೈವ-ಅದ್ವೈತಾದಿ ಮತಗಳಿಗೆ ಯಾವ ಬೆಲೆಯೂ ಸಿಗದಂತಾಗುವುದರಲ್ಲಿ ಸಂದೇಹವಿಲ್ಲವಷ್ಟೆ

ಆಪಾತತಃ ಮಾ-ಮಂಜರಿಯನ್ನು ಕಂಡವರಿಗೆ ಅಲ್ಲಿ ಉದಾಹರಿಸುವ ಅನುಷ್ಟುಪ್ ಶ್ಲೋಕಗಳ ರಾಶಿಯಿಂದ ವಿಷ್ಣುಸರ್ವೋತ್ತಮತ್ವದ ಬಗ್ಗೆ ಸಂದೇಹ ಬರುವಂತಾಗಿದೆ. ವಿಷ್ಣು ಸರ್ವೋತ್ತಮತೆಯನ್ನು ಪ್ರತಿಪಾದಿಸುವ ಪುರಾಣವಾಕ್ಯಗಳೂ ಹಾಗೇ ಸಾಕಷ್ಟು ಇದ್ದರೂ ಈ ಸಂದೇಹ ಬಗೆ ಹರಿಯದಂತೆ ಮಾ-ಮಂಜರಿಯ ಶ್ಲೋಕಗಳು ಅಡ್ಡಿಯಾಗಿವೆ. ಈ ಶ್ಲೋಕಗಳೆಲ್ಲ ಕಲ್ಪಿತವೆಂದು ಹೇಳಿ, ವಿಷ್ಣು ಸರ್ವೋತ್ತಮತ್ವವನ್ನು ಸಮರ್ಥಿಸ ಹೊರಟರೆ, ಮಲಗುವನಿಗೆ ಹಾಸಿಗೆ ಹಾಸಿ ಕೊಟ್ಟಂತೆ ಆಗುತ್ತದೆ. ಎಲ್ಲವೂ ಕಲ್ಪಿತವೆಂದು ಹೇಳುವ ಅಪ್ಪಯ್ಯದೀಕ್ಷಿತಾದಿಗಳ ಪರಂಪರೆಯ ಈ ವಾದಿಗಳು, ಮಧ್ವಾಚಾರ್ಯರ ಉದಾಹರಿಸಿದ ವಾಕ್ಯಕ್ಕೂ ಇದೇ ಕಲ್ಪಿತತ್ವವಾದವನ್ನೇ ಹೇಳುವುದಕ್ಕೆ ಪ್ರತಿಯಾಗಿ ಏನು ಹೇಳಲಾದೀತು? ಆದ್ದರಿಂದ ಈ ಮಾ-ಮಂಜರಿಯ ಪುರಾಣವಾಕ್ಯಗಳು ನಿಜವಾಗಿಯೂ ಕಲ್ಪಿತವೇ ಆಗಿದ್ದರೂ ಸಹ, ಆ ರೀತಿಯಿಂದ ವಿಮರ್ಶೆ ಆರಂಭಿಸುವುದು ಸಂದರ್ಭೋಚಿತವಾಗಲಾರದು. ''ಅವರಿಗೆ ಅವರದು ಸರಿ ನಮಗೆ ನಮ್ಮದು ಸರಿ'' ಎಂದು ಈ ವಿವಾದ ಕೊನೆಗೊಳ್ಳುವಂತಾಗುತ್ತದೆಯೇ ಹೊರತು, ಇಬ್ಬರಿಗೂ ಒಪ್ಪುವಂತೆ ವಿವಾದದ ಕೊನೆ ಇದಾಗುವುದಿಲ್ಲ. ಇದನ್ನು ಗಮನಿಸಿಯೇ ಈ ವೈಭವಗ್ರಂಥದಲ್ಲಿ ಉಭಯಸಮ್ಮತವಾದ ವೇದಗಳ ಆಧಾರದಿಂದ ಮೊದಲು ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸಿ, ಅದರ ಬಲದಿಂದ ಮುಂದಿನ ಎಲ್ಲ ವಿಚಾರಕ್ಕೂ ಅಣಿಯಿಡುವ ಕ್ರಮ ಅತ್ಯಂತ ಉಚಿತವೆನಿಸುತ್ತಿದೆ. ಆದ್ದರಿಂದಲೇ, ಈ ವೈಭವಗ್ರಂಥದ ವಿಷಯಪ್ರತಿಪಾದನೆ ವೈಭವೋಪೇತವೆಂದು ಹೇಳಿದ್ದು ಸಾರ್ಥಕವಷ್ಟೆ

## ವಿಷ್ಣುಸರ್ವೋತ್ತಮತ್ವ

ಇದೇ ಶ್ರುತಿಯ ಸಿದ್ಧಾಂತವೆಂದು ಸಮರ್ಥಿಸುವ ಈ ವೈಭವಗ್ರಂಥದ ಪ್ರತಿಪಾದನ ಕ್ರಮ ಹೇಗೆಂಬುದು, ಈ ಲೇಖನದ ಆರಂಭದಲ್ಲೇ ಬಂದಿದೆಯೆಂದು ಈಗ ಅದನ್ನು ವಿಸ್ತರಿಸುವ ಆವಶ್ಯಕತೆಯಿಲ್ಲ. ಸರ್ವನಾಮವಾಚ್ಯತ್ವವು ವಿಷ್ಣುವಿಗೇ ಇರುವುದರಿಂದ, ಸರ್ವೋತ್ತಮ ದೇವತೆ ವಿಷ್ಣುವೇ ಆಗುವನೆಂಬ ಪೂರ್ವೋಕ್ತವಿಚಾರಕ್ಕೆ, ಈ ವೈಭವಗ್ರಂಥದಲ್ಲಿ ಉದಾಹರಿಸಿದ ಪ್ರಮಾಣಗಳು ಹೀಗಿವೆ :-

1. ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ,.
2. ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ।
3. ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನೇಶಾನಃ ।
4. ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ।

5. ಯಂ ಯಂ ಕಾಮಯತೇ ವಿಷ್ಣುಸ್ತಂ ಬ್ರಹ್ಮಾಣಂ ಚ ಶಂಕರಮ್ ।
ಶಕ್ರಂ ಸೂರ್ಯಂ ಯಮಂ ಸ್ಕಂದಂ ಕುರ್ಯಾತ್ ಕರ್ತಾಸ್ಯ ನ ಕ್ವಚಿತ್ ॥

6. ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಂ ।
ಅವಾಂತರಂ ತತ್ವರತ್ವಂ ತದನ್ಯತ್ ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥

7. ಪರೋ ಮಾತ್ರಯಾ ತನ್ವಾವೃಧಾನ ನ ತೇ ಮಹಿತ್ವಮನ್ವಶ್ನುವಂತಿ ।
ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ॥

8. ನಾರಾಯಣಾದ್‌ಬ್ರಹ್ಮಾ ಜಾಯತೇ । ನಾರಾಯಣಾದ್ರುದ್ರೋ ಜಾಯತೇ ॥

ಇತ್ಯಾದಿ ಶ್ರುತಿ ವಾಕ್ಯಗಳಿಂದ ವಿಷ್ಣುವಿಗೆ ಸರ್ವನಾಮಧರತ್ವ - ಸರ್ವೋತ್ತಮತ್ವಗಳು ಸಿದ್ಧವಾಗಿವೆ. "ಸೋಮಃ ಪವತೇ.......ಜನಿತೋತ ವಿಷ್ಣೋಃ" ಎಂಬ ಶ್ರುತಿಯಿಂದ ವಿಷ್ಣುವಿಗೆ ಜನನಾದಿ ದೋಷವನ್ನು ಶಂಕಿಸಿದರೆ, ಇಲ್ಲಿ ವಿಷ್ಣು ಶಬ್ದಕ್ಕೆ ಯಜಮಾನಾದಿ ಅರ್ಥಾಂತರಪರತ್ವವನ್ನು ಪ್ರತಿಪಾದಿಸಿ ಪರಿಹರಿಸಲಾಗಿದೆ. ಹೀಗೆ ಶ್ರುತಿಸಿದ್ಧವಾದ ಈ ವಿಷ್ಣು ಸರ್ವೋತ್ತಮತ್ವಕ್ಕೆ ವಿರುದ್ಧವಾಗಿ, ಶಿವಪಾರಮ್ಯವನ್ನು ಹೇಳುವ ಮಾ-ಮಂಜರಿಯಲ್ಲಿ ಉದಾಹರಿಸಿದ ಪುರಾಣವಾಕ್ಯಗಳೆಲ್ಲ ಕಲ್ಪಿತವೆಂದು ಅಥವಾ ಮೋಹಕವಾದ ತಾಮಸ ಪುರಾಣಭಾಗವೆಂದು ತಿಳಿದು ಅದಕ್ಕೆ ಯಾವುದೇ ಬೆಲೆಯಿಲ್ಲವೆಂದು ಮನಗಾಣಬೇಕು.

## ಪುರಾಣಗಳಲ್ಲಿ ತಾಮಸವೆಂದರೇನು?

ಸ್ವರೂಪತಃ ತಮೋಯೋಗ್ಯರಾದ ಜೀವರಿಗೆ ತಮಸ್ಸಿಗೆ ಸಾಧನವಾಗುವ ಅನ್ಯಥಾಮತಿಗೆ ಕಾರಣವಾದ ಭಾಗವೇ ತಾಮಸವೆಂದೆನಿಸುತ್ತದೆ. ರಾಜಸ ಜೀವರಿಗೆ ಸುಖ-ದುಃಖ ಮಿಶ್ರ ಫಲಕಾರಣವಾಗುವ ಜ್ಞಾನನೀಡುವ ಭಾಗ ರಾಜಸವೆನಿಸುತ್ತದೆ. ಸ್ವರೂಪತಃ ಸಾತ್ವಿಕರಾದ ಜೀವರಿಗೆ ತತ್ವಜ್ಞಾನ ಸಾಧನವಾದುದೇ ಸಾತ್ವಿಕವು. ಹೀಗೆ ಅಧಿಕಾರಿಜೀವರ ಸಾತ್ವಿಕ-ರಾಜಸ-ತಾಮಸ ವಿಭಾಗಕ್ಕೆ ಅನುಗುಣವಾಗಿ ಪುರಾಣಗಳ ತ್ರೈವಿಧ್ಯವನ್ನು ಗುರುತಿಸಬೇಕು. ಇದಕ್ಕೆ ವ್ಯತಿರಿಕ್ತವಾಗಿ ಕರ್ತೃಗಳ ತಾಮಸತ್ವದಿಂದ ಅಥವಾ ಕಾಲದ ತಾಮಸತ್ವದಿಂದ ಈ ವಿಚಾರವನ್ನು ಪ್ರಸ್ತಾಪಿಸುವ ಮಾ-ಮಂಜರಿಯು ಸರಿಯಲ್ಲವೆಂದು ತಿಳಿಯಬೇಕು. ಸಕಲಪುರಾಣಕರ್ತೃಗಳಾದ ವೇದವ್ಯಾಸದೇವರಲ್ಲಿ ತಾಮಸತ್ವದ ಶಂಕೆ ಯಾರಿಗೂ ಇಲ್ಲವಷ್ಟೆ. ತಾಮಸ ಕಲಿಗಾಲದಲ್ಲಿ ನಿರ್ಮಿತವಾದರೂ ಶಾಂಕರಭಾಷ್ಯಾದಿಗಳನ್ನು ಪರಮತೀಯರು ತಾಮಸವೆಂದು ಒಪ್ಪಲಾರರಷ್ಟೆ. ಆದ್ದರಿಂದ ಜೀವತ್ರೈವಿಧ್ಯದಿಂದಲೇ ಈ ಪುರಾಣತ್ರೈವಿಧ್ಯವನ್ನು ಗುರುತಿಸಿಕೊಂಡು, ಅದರಲ್ಲಿ ಶ್ರುತಿಗೆ ಅನುಗುಣವಾಗದ ತಾಮಸ ಶೈವಾದಿ ಪುರಾಣಾವಲಂಬಿಯಾದ ಈ ಮಾ-ಮಂಜರಿಯು, ಹಾಗೂ ಅದರಲ್ಲಿ ಹೇಳಿದ ವಿಷಯಗಳೆಲ್ಲ ಅಪ್ರಾಮಾಣಿಕವೆಂದು, ಶ್ರುತ್ಯನುಸಾರಿ ಸಾತ್ವಿಕ ವೈಷ್ಣವ ಪುರಾಣಾವಲಂಬಿಯಾದ ಮಣಿಮಂಜರಿಯು ಮತ್ತು ಅಲ್ಲಿ ಹೇಳಿದ ವಿಷಯಗಳೆಲ್ಲ ಪ್ರಾಮಾಣಿಕವೆಂದು ಸಾಮಾನ್ಯಾಕಾರದಿಂದ ನಿರ್ಧರಿಸಬಹುದು.

## ಶಿವನಿಗೆ ಶಿವತ್ವ ಹೇಗೆ?

ಸ್ಮಶಾನವಾಸಿಯು - ಚಿತಾಭಸ್ಮಧಾರಿಯು - ಭೂತಪ್ರೇತಪಿಶಾಚ ಪರಿವಾರಿಯು ಆದ ಶಿವನು ಅಪವಿತ್ರನೆಂಬ ಪ್ರಶ್ನೆ ಹಾಕಿಕೊಂಡು, ಇದಕ್ಕೆ ಉತ್ತರವಾಗಿ ಸ್ಮಶಾನವು ಪವಿತ್ರಸ್ಥಳವೆಂದು, ಚಿತಾಭಸ್ಮವು ಪರಮ ಮಂಗಲವೆಂದು, ಪಿಶಾಚಗಳೆಲ್ಲ ಶಿವಾಂಶವೆಂದು ಹೇಳುವ ಮಾ-ಮಂಜರಿಯನ್ನು ವೈಭವಗ್ರಂಥ ವಿಮರ್ಶಿಸುವ ರೀತಿ ಸೊಗಸಾಗಿದೆ. ಸ್ಮಶಾನಾದಿಗಳೆಲ್ಲ ಪವಿತ್ರವೇ ಆದಲ್ಲಿ, ಅಲ್ಲಿಗೆ ಹೋಗಿದ್ದಕ್ಕೆ, ಅದರ ಸ್ಪರ್ಶಾದಿಗಳಿಗೆ ಉಂಟಾದ ಮೈಲಿಗೆ ಹೋಗಲು ಸ್ನಾನಾದಿಗಳನ್ನು ಮಾಡುವ ಶಿಷ್ಟಾಚಾರ ಇಲ್ಲವಾಗಲಿ ಎಂದು ಆಕ್ಷೇಪಿಸಿದ್ದು ಎಲ್ಲರಿಗೂ ಮನ ಮುಟ್ಟುವಂತಿದೆ. ಆದ್ದರಿಂದ ಶಿವನಿಗೆ ಶಿವತ್ವ ಹೇಗೆ? ಎಂಬ ಪ್ರಶ್ನೆಗೆ ಮಾ-ಮಂಜರಿಯಲ್ಲಿ ಉತ್ತರವಿಲ್ಲ. ಇದಕ್ಕೆ ನೈಜ ಶಿವಭಕ್ತರಾದ ಮಾಧ್ವರೇ ಉತ್ತರಿಸಲು ಸಮರ್ಥರಷ್ಟೆ ಆ ಉತ್ತರ ಈ ವೈಭವದಲ್ಲಿ ಹೀಗೆ ಚಿತ್ರಗೊಂಡಿದೆ :-

> ಯಚ್ಛೌಚನಿಸ್ಸೃತಸರಿತ್ಪ್ರವರೋದಕೇನ
> ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ॥

ಎಂದು ಭಾಗವತದಲ್ಲಿ ತಿಳಿಸಿದಂತೆ, ವಿಷ್ಣುಪಾದೋದಕವಾದ ಗಂಗೆಯನ್ನು ಧರಿಸಿದ್ದರಿಂದಲೇ, ಅಪವಿತ್ರತೆಗೆ ಅನೇಕ ಕಾರಣವಿದ್ದರೂ ಶಿವನಿಗೆ ಶಿವತ್ವ-ಅಂದರೆ, ಪರಮ ಪಾವಿತ್ರ್ಯ ಬಂದಿತೆಂದು ತಿಳಿಯುವುದೇ ಉತ್ತರವಾಗಿದೆ. ಇದರಿಂದ "ವೈಷ್ಣವಾನಾಂ ಯಥಾ ಶಂಭುಃ" ಎಂಬ ಭಾಗವತ ಪ್ರಮಾಣಾನುಗುಣವಾಗಿ, ವಿಷ್ಣು ಭಕ್ತಾಗ್ರಣಿಯಾದ ರುದ್ರದೇವರನ್ನು ವಿಷ್ಣುವಿಗಿಂತ ಮಿಗಿಲಾಗಿ ವೈಭವೀಕರಿಸಲು ಹೊರಟ ಮಾ-ಮಂಜರಿಯು ಹಾಸ್ಯಾಸ್ಪದ ಆಗುತ್ತದೆಯಷ್ಟೆ

## ಶೈವ ರಾಮಾಯಣ ಕಥೆ

ಪಿಶಾಚಸೇವಿತನಾದ ಶಿವನನ್ನು ಸಾತ್ವಿಕರು ಸೇವಿಸಬಾರದೆಂಬ ಸ್ವಕಪೋಲಕಲ್ಪಿತ ಆಕ್ಷೇಪ ಹಾಕಿಕೊಂಡು, ಅದಕ್ಕೆ ಉತ್ತರವಾಗಿ, ಮಾ-ಮಂಜರಿಯಲ್ಲಿ ಈ ಕಥೆಯನ್ನು ಪ್ರಸ್ತಾಪಿಸಲಾಗಿದೆ. ಶಿವನ ಪ್ರಸಾದದಿಂದ ಬಲಶಾಲಿಯಾದ ರಾವಣನನ್ನು ಅವನಿಗಿಂತ ಹೆಚ್ಚು ತಪಸ್ಸು ಮಾಡದೆ ಗೆಲ್ಲಲಾಗದೆಂದು, ವಿಷ್ಣುವು ದೇವತೆಗಳಿಗೆ ಹೇಳಿದನಂತೆ. ಆಗ ಶಿವಲೋಕಕ್ಕೆ ಬಂದ ಆ ದೇವತೆಗಳನ್ನು, ಬಾಗಿಲಲ್ಲೆ ತಡೆದ ನಂದೀಶನು ಮೈಶ್ರಮವಹಿಸಿ ತಪಸ್ಸು ಮಾಡದೆ ಶಿವದರ್ಶನವಾಗದೆಂದು ಹೇಳುತ್ತ ಆ ರಾವಣ ತನಗೂ ಅಪರಾಧ ಮಾಡಿರುವನೆಂದು ಅವನನ್ನು ಕೊಲ್ಲಲು ವೈಕುಂಠಕ್ಕೆ ಕರೆದು ತಂದನಂತೆ. ತಪಸ್ಸು ಮಾಡಲು ಶಕ್ತಿಯಿಲ್ಲದೆ ತನ್ನ ಬಳಿ ಬಂದ ಆ ದೇವತೆಗಳಿಗೆ ನೆರವಾಗಲು, ರಾವಣನಿಗೆ ಸೀತೆಯ ಅನುರಾಗವೆಂಬ ಮೋಹವನ್ನು ಉಂಟುಮಾಡಿಸಿ, ತಪೋಬಲವನ್ನು ಕುಗ್ಗಿಸಿ, ಅವನನ್ನು ಕೊಲ್ಲಬೇಕೆಂಬ ಉಪಾಯವನ್ನು ಹೇಳಿದ ವಿಷ್ಣು ಹಾಗೆ ಮಾಡಿದನಂತೆ. ಮಾ-ಮಂಜರಿಯು ಈ ಕಥೆಯನ್ನು ಹೇಳಿ ಇದರಿಂದ ಶಿವನು

ಸಾತ್ವಿಕ ತಪಸ್ವಿಗಳಿಂದ ಸೇವಿತನೆಂಬ ತೀರ್ಮಾನ ಮಾಡಲು ಹೊರಟಿದೆ. ಇದು ನೈಜ ರಾಮಾಯಣ ಬಲ್ಲವರಿಗೆ ನಗೆಪಾಟಲಿಗೆ ಗುರಿಯಾಗಿದೆ. ಈ ಕಥೆಯಿಂದ ಶಿವನು ತಾಮಸ ರಾವಣಾದಿ ಸೇವಿತನೆಂದು ಹಾಗು ಸಾತ್ವಿಕದೇವತೆಗಳಿಂದ ಸೇವಿತನಾಗಲಿಲ್ಲವೆಂದು ಹೇಳಿ, ಅದಕ್ಕೆ ವಿರುದ್ಧವಾಗಿ ಈ ಕಥೆಯಿಂದ ಶಿವನು ಸಾತ್ವಿಕ ತಪಸ್ವಿಸೇವ್ಯನೆಂಬ ಮಾತು ಸ್ವವ್ಯಾಹತವಷ್ಟೆ. ಇದ ರಂತೆ, ಶಿವನು ಅನಂತಕಲ್ಪದ ಬ್ರಹ್ಮಕಪಾಲಮಾಲೆಯನ್ನು ಧರಿಸುವನೆಂದು, ವಿಷ್ಣುನಿಗ್ರಹಾದಿಗಳನ್ನು ಮಾಡುವನೆಂಬುದೇ ಮೊದಲಾದ ಶ್ರುತಿಸಿದ್ಧಾಂತವಿರುದ್ಧ ಟುಪ್‌ಶ್ಲೋಕಾಧಾರಿತ ಕಥೆಗಳಲ್ಲಿಯೂ ಸಹ ಅನುಪಪನ್ನತೆಯನ್ನು ಪ್ರತಿಪಾದಿಸುವ ರೀತಿ ಈ ವೈಭವಕೃತಿಯಲ್ಲಿ ಹೃದಯಂಗಮವಾಗಿದೆ.

## ರುದ್ರನ ರೋದನ

> ಯದರೋದೀಃ ಸುರಶ್ರೇಷ್ಠ ಸೋದ್ವೇಗ ಇವ ಬಾಲಕಃ ।
> ತತಸ್ತ್ವಾಮಭಿಧಾಸ್ಯಂತಿ ನಾಮ್ನಾ ರುದ್ರ ಇತಿ ಪ್ರಜಾಃ ॥

ಎಂದು ಭಾಗವತದಲ್ಲಿ ತಿಳಿಸಿದಂತೆ ರೋದನ(ಅಳುವುದು) ಮಾಡಿದ್ದರಿಂದಲೇ ರುದ್ರದೇವರಿಗೆ 'ರುದ್ರ' ಎಂಬ ಹೆಸರು ಬಂದಿರುತ್ತದೆ. ಬಾಣಾಸುರ-ಭಸ್ಮಾಸುರ ಇತ್ಯಾದಿಗಳ ಕಥಾ ಸನ್ನಿವೇಶದಲ್ಲಿ ವಿಷ್ಣುವಿನ ಮುಂದೆ ತನ್ನ ಅಸಾಮರ್ಥ್ಯಾದಿ ದೋಷವಿಷ್ಕರರೂಪವಾದ ಈ ರುದ್ರರೋದನ ಪ್ರಮಾಣಸಿದ್ಧವಾಗಿದೆ. ನಾರಾಯಣನ ಮೋಹಿನೀರೂಪಕ್ಕೆ ಮರುಳಾಗಿ ವೀರ್ಯಸ್ಖಲನಾದಿ ದೋಷಗ್ರಸ್ತನಾಗಿ ರೋದಿಸುವುದೂ ಸಹ ಇಲ್ಲಿ ಗಮನಿಸಬೇಕಾದ ಅಂಶವು. ಹೀಗೆ ಹೆಸರಿನಿಂದಲೇ ದೋಷಗ್ರಸ್ತನೆಂದು ಪ್ರಸಿದ್ಧನಾದ ರುದ್ರನಿಗೆ ವಿಷ್ಣುವಿಗಿಂತಲೂ ಉತ್ತಮತ್ವವನ್ನು ಹೇಳಬೇಕೆಂದು ಒಂದು ಪದ್ಯದಿಂದ ಪ್ರಶ್ನೆ ಮಾಡಲು ಹೊರಟ ಮಾ-ಮಂ ಕಾರನಿಗೆ ಅದೇ ಪದ್ಯದ ರೂಪದಿಂದಲೇ ಉತ್ತರಿಸುವ ವೈಭವದ ಪ್ರವೃತ್ತಿಯು ಸೂಕ್ತ ಪ್ರತಿಕ್ರಿಯೆಯಾಗಿದೆ.

**ಮಾ-ಮಂಜರಿಯ ಪದ್ಯ :-**

> ಸ್ವಾಪತ್ಯಾಂಗ ವಿನಾಶನೇಽಪಿ ಚ ಶಿರಚ್ಛೇದೇ ಸ್ವಸೂನೋರ್ವಿಧೇಃ
> ಸ್ವಾಂಗಸ್ಯ ತ್ರಿಶಿಖೇನ ಭೇದನವಿಧೌ ರುದ್ರೇಣ ದೈತ್ಯದ್ವಿಷಃ ॥
> ಶಕ್ತಿಃ ಕುತ್ರ ಗತಾದ್ಯ ಬಾಣಸಮರೇ ಪ್ರಾಪ್ತಾ ತಥಾ ಜೀರಿಣಃ
> ಚಾಪಸ್ಯಾಸ್ಯ ಹಿ ಖಂಡನೇ ರಘುಭುವೋ ಜಾತಾ ಜಡಸ್ತ್ವಂ ವದ ॥

**ಮಂಜರೀವೈಭವದ ಪದ್ಯ :-**

> ಸ್ವಾಪತ್ಯಾಂಗವಿನಾಶನೇಽಪಿ ಚ ಶಿರಚ್ಛೇದೇ ಸ್ವಸೂನೋರ್ವಿಧೇಃ
> ಸ್ವಾಂಗಸ್ಯ ತ್ರಿಶಿಖೇನ ಭೇದನವಿಧೌ ರುದ್ರಸ್ಯ ನೈಚ್ಯಪ್ರದಮ್ ॥

ಕೃಷ್ಣೇನಾಮಲಮೂರ್ತಿನಾ ಕಲಿಮಲಂ ಬಾಣೋರುಚಾಪಚ್ಛಿದಾ
ರಾಮೇಣಾತ್ಮನಿ ಪೂರ್ಣತಾ ತ್ವಯಿ ಪುನರ್ಮೂರ್ಖತ್ವಮಾವಿಷ್ಕೃತಮ್ ॥

**ಪ್ರಶ್ನೆ** :- ದೈತಾರಿಯಾದ ಶಿವನು, ತನ್ನ ಮಗನನ್ನು (ಕಾಮನನ್ನು) ಸುಟ್ಟಾಗ, ತನ್ನ ಮಗನ (ಬ್ರಹ್ಮನ) ತಲೆ ತೆಗೆದಾಗ, ತನ್ನ (ವಿಷ್ಣುವಿನ) ಮೈಗೆ ತ್ರಿಶೂಲದಿಂದ ತಿವಿದಾಗ ಈ ರಾಮನಿಗೆ (ವಿಷ್ಣುವಿಗೆ) ಶಕ್ತಿ ಎಲ್ಲಿ ಹೋಗಿತ್ತು? ಈಗ ಬಾಣಾಸುರನ ಯುದ್ಧದಲ್ಲಿ ಹಾಗು ಜೀರ್ಣವಾದ ಶಿವ ಬಿಲ್ಲನ್ನು ಮುರಿವಾಗ ಎಲ್ಲಿಂದ ಬಂತು? ಎಲೈ ದಡ್ಡ! ಹೇಳು.

**ಉತ್ತರ** : ರಾಮ, ರೂಪಿ ಪರಮಾತ್ಮನಿಂದ ಶ್ರೀಕೃಷ್ಣ ತನ್ನ ಮಗನನ್ನು (ಕಾಮನನ್ನು) ಸುಟ್ಟಾಗ, ತನ್ನ ಮಗನ (ಬ್ರಹ್ಮನ) ತಲೆ ತೆಗೆದಾಗ, ತನ್ನ ಮೈಗೆ ತ್ರಿಶೂಲದಿಂದ ತಿವಿದಾಗ ರುದ್ರನಿಗೆ ನೀಚತ್ವವನ್ನು ತರುವ ಕಲಿಮಲವಿದೆಯೆಂದು, ನಿರೂಪಿತವಾಯಿತು. ಬಾಣಾಸುರ-ಶಿವಬಿಲ್ಲುಗಳ ಛೇದನ-ಭೇದನದಿಂದ ತನ್ನ ಪೂರ್ಣತ್ವವು ಪ್ರತಿಪಾದಿತವಾಯಿತು. ಎಲೈ ಮಾ-ಮಂಜರಿಕಾರನೇ ಈಗ ನಿನ್ನ ಮೂರ್ಖತನವೂ ವ್ಯಕ್ತವಾಯಿತಷ್ಟೆ

ಹೀಗೆ ರುದ್ರಾದಿಗಳಿಗೂ ಕಲಿಮಲವಿದೆಯೆಂಬುದಕ್ಕೆ ಸಾಕ್ಷಿಯಾದ, ಕಾಮವಿಕಾರಸೂಚಕ ಕಾಮದಹನಕಥೆಯನ್ನು ಕ್ರೋಧಸೂಚಕ ಬ್ರಹ್ಮಶಿರಚ್ಛೇದನ ಕಥೆಯನ್ನು ಪರಬ್ರಹ್ಮನ ಬಗ್ಗೆ ಅಜ್ಞಾನಾದಿ ಸೂಚಕ ತ್ರಿಶಿಖಭೇದನವನ್ನು ಶಿವನಿಗೆ ಉಚ್ಚತ್ವಾಪಾದಕವಾಗಿ ಪ್ರತಿಪಾದಿಸ ಹೊರಟ ಮಾ-ಮಂಜರೀ ಕಾರನ ಮೂರ್ಖತನ ಇದರಿಂದ ಸ್ಫುಟವಾದಾಗ, ಯಾರು ಯಾರು ರುದ್ರರೋದನ ಮಾಡುವರೆಂದು ಆ ಶಿವನೇ ಬಲ್ಲ!

## ಗಂಗಾಧರನೋ-ಗಂಗಾಹರನೋ?

ಈ ಮಾ-ಮಂಜರಿಯನ್ನು ಕಂಡಾಗ ಈ ಶಂಕೆ ಸಹಜವಾಗಿದೆ. "ಗಂಗಾಯಾಮಿವ ಲೋಚನಾಗ್ನಿತಪನಾಚ್ಛೈಷ್ಕ್ಯಂ ಗತಾಯಾಂ" ಎಂಬ ಶ್ಲೋಕದಿಂದ ರುದ್ರನ ಹಣೆಗಣ್ಣಿನ ಬಿಸಿಗೆ ಗಂಗೆ ಒಣಗಿದಳೆಂದು ಚಿತ್ರಿಸುವಂತಾಗಿ, ಮಂಗಲಕರವಾದ ಗಂಗೆಯ ಶುಷ್ಕತೆಯೆಂಬ ಅಮಂಗಳ ವಿಷಯದಿಂದ ಆರಂಭವಾದ ಈ ಮಾ-ಮಂಜರಿಯಲ್ಲಿ, ಮುಂದೆ, ("ಕವಿರಯಂ ಪದ್ಯೇSಸ್ಮಿನ್ ಗಂಗಾಧರತ್ವ-ಭಾಲಲೋಚನತ್ವ-ಜಟಾಧರತ್ವ....... ವ್ಯಂಜಯಾಮಾಸ" ಎಂದು). "ಈ ಪದ್ಯದಲ್ಲಿ ಗಂಗಾಧರತ್ವವನ್ನು ನಿರೂಪಿಸಿದನೆಂದು" ಹೇಳಿದ್ದು "ಗಂಗಾಶಬ್ದಪ್ರಯೋಗದಿಂದ ಪೂರ್ಣಗಂಗಾ ಚಿತ್ರೇಷ್ಯತೆ"ಯೆಂದು ಹೇಳಿದ್ದೂ ವ್ಯಾಹತವಾಗಿದೆಯಷ್ಟೆ ಆದ್ದರಿಂದ ಮೇಲೆ ಹೇಳಿದ ಶಂಕೆ ಮಾ-ಮಂಜರಿಗೆ ದೊಡ್ಡ ಕಳಂಕವಾಗಿದೆ.

## ಗಂಗಾಧರತ್ವ ವಿಷ್ಣುಭಕ್ತಿಸೂಚಕವು

ಗಂಗೆಗೆ ವಿಷ್ಣುಪದೀ ಎಂದು ಹೆಸರು. ವಿಷ್ಣುಪಾದದಿಂದ ಜನಿಸಿದ ಗಂಗೆಗೆ ಈ ಹೆಸರು

ಅರ್ಥಪೂರ್ಣ. ಆ ಗಂಗೆ ಜನಿಸಿದ ತಾಣವಾದ ಆಕಾಶ 'ವಿಷ್ಣುಪದ' ಎಂದೇ ಅನ್ವರ್ಥವಾಗಿದೆ. ಆ ಆಕಾಶ ಶಿವನಿಗೆ ಜಟೆಯಾಗಿದ್ದರಿಂದಲೇ ಶಿವನು 'ವ್ಯೋಮಕೇಶ' ಎನಿಸಿದ್ದಾನೆ. ಹೀಗೆ ಗಂಗೆಯ 'ವಿಷ್ಣುಪದೀ' ಎಂಬ ಹೆಸರು, ಆಕಾಶಕ್ಕೆ 'ವಿಷ್ಣುಪದ' ಎಂಬ ಹೆಸರು, ಶಿವನ ''ವ್ಯೋಮಕೇಶ'' ನೆಂಬ ಹೆಸರು – ಇವೆಲ್ಲವನ್ನು ಸರಿಯಾಗಿ ಪರಿಶೀಲಿಸಿದಾಗ ವಿಷ್ಣುಪಾದೋದಕವಾದ ಗಂಗೆಯನ್ನು ತನ್ನ ಕೇಶದಲ್ಲಿ ಶಿವನು ಧರಿಸಿದನೆಂಬ ಸಂಗತಿ, ಹೆಚ್ಚಿನ ಪ್ರಮಾಣದ ಆವಶ್ಯಕತೆಯೇ ಇಲ್ಲದಂತೆ ಸ್ಪಷ್ಟವಾಗುವುದಷ್ಟೆ

ಹೀಗಿದ್ದೂ ಮಾ-ಮಂಜರಿಯಲ್ಲಿ ಶಿವ ಧರಿಸಿದ ಗಂಗೆ ವಿಷ್ಣುಪಾದೋದಕವಲ್ಲವೆಂದು ವಾದಿಸುತ್ತಾ ಹಿಮವಂತನ ಮಗಳಾದ 'ಕುಟಿಲಾ' ಎಂಬುವಳೇ ಶಿವನ ಶಿರದಲ್ಲಿ ಮರೆದ ಗಂಗೆಯೆಂದು ಹೇಳಿರುವುದು ಕೇವಲ ದುರಾಗ್ರಹವು. ಶಿವನು ವಿಷ್ಣುಪಾದೋದಕದಿಂದಲೇ ಪುನೀತನಾಗುವ ವಿಚಾರ ಭಾಗವತದಲ್ಲಿ ಸ್ಪಷ್ಟವಾಗಿದೆ.

''ಅಥಾಪಿ ಯತ್ಪಾದನಖಾವಸೃಷ್ಟಂ ಜಗದ್ವಿರಿಂಚೋಪಹೃತಾರ್ಹಣಾಂಭಃ ॥
ಸೇಶಂ ಪುನಾತ್ಯನ್ಯತಮೋ ಮುಕುಂದಾತ್ ಕೋ ನಾಮ ಲೋಕೇ ಭಗವತ್ಪದಾರ್ಥಃ॥

''ಯಚ್ಛೌಚನಿಸ್ಸೃತ ಸರಿತ್ ಪ್ರವರೋದಕೇನ
ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋऽಭೂತ್'' ಎಂದು
''ದಧಾರಾವಹಿತೋ ಗಂಗಾಂ ಪಾದಪೂತಜಲಾಂಹರೇಃ''

ವಾಮನಪುರಾಣದಲ್ಲಿ, ಹಿಮವತ್ ರಾಜನ ಮಗಳಾದ ಕುಟಿಲಾ ಎಂಬುವ ಶಿವಶಿರೋಗತಳೆಂದು ಹೇಳಿದ್ದಿದೆಯೆಂದು ಮಾ-ಮಂಜರಿಯು ವಾದಿಸಿದರೆ, ವಾಮನಾದಿ ಪುರಾಣಗಳನ್ನು ಭಾಗವತಾದಿ ಗಳಿಗೆ ಅನುಗುಣವಾಗಿ ಯೋಜಿಸುವ ರೀತಿ ಈ ವೈಭವಗ್ರಂಥದಲ್ಲಿ ಹೃದಯಂಗಮವಾಗಿದೆ. ವಿಷ್ಣುಪಾದೋದಕ ನದ್ಯಭಿಮಾನಿ ಗಂಗೆಯೇ ಒಂದು ರೂಪದಿಂದ ಹಿಮವತ್‌ಪುತ್ರಿಯಾಗಿ ವಾಮನಪುರಾಣಪ್ರತಿಪಾದ್ಯಳೆಂದು ಒಪ್ಪಿದಾಗ ಯಾವ ವಿರೋಧವೂ ಇಲ್ಲ. ಇದನ್ನೊಪ್ಪದೆ, ವಿಷ್ಣುಪಾದೋದಕ ಗಂಗೆಗೂ ಶಿವಶಿರೋಗತಗಂಗೆಗೂ ಭೇದವೆಂದು ಆಗ್ರಹ ತುಂಬಿಕೊಂಡ ಈ ಕುಟಿಲ ಅಭೇದ ಸಿದ್ಧಾಂತಿಯು, ಒಂದು ನದಿಯ ನೀರಲ್ಲಿ ಮತ್ತೊಂದು ಸೇರಿದಂತೆ, ಶಿವಶಿರದಲ್ಲಿರುವ ಈ ಕುಟಿಲೆಯಲ್ಲಿ ವಿಷ್ಣುಪಾದೋದಕವೂ ಮಿಶ್ರಿತವಾಗಿರುವುದರಿಂದ 'ಶಿವನು ವಿಷ್ಣುಪದೀಧರ' ನೆಂದು ಹೇಳಿದ್ದನ್ನು ಒಪ್ಪಬಹುದೆಂದು ವಾದಿಸುವುದು, ''ಬೆಳ್ಳುಳ್ಳಿ ತಿಂದರೂ ರೋಗ ಹೋಗಲಿಲ್ಲ'' ಎಂಬ ಗಾದೆಯ ಮಾತಿನಂತೆ ಹಾಸ್ಯಾಸ್ಪದವಾಗುತ್ತದೆ. ಶಿವನು ವಿಷ್ಣು ಪಾದೋದಕ ಧರಿಸುವುದನ್ನು ಅಲ್ಲಗಳೆಯಲು ಅನೇಕ ಕಸರತ್ತು ಮಾಡಿ ಕೊನೆ ಶಿವನ ತಲೆಯಲ್ಲಿರುವ ಕುಟಿಲನೀರಿನಲ್ಲಿ ವಿಷ್ಣುಪಾದೋದಕ ಬೆರೆತಿದೆಯೆಂದು ಉತ್ತರಿಸುವ ರೀತಿ ಯಾರಿಗೆ ನಗೆ ತರಿಸುವುದಿಲ್ಲ?

ಈ ಸಂದರ್ಭದಲ್ಲಿ ಶ್ರೀವಾದಿರಾಜಸ್ವಾಮಿಗಳು ತೀರ್ಥಪ್ರಬಂಧದಲ್ಲಿ ಕಾಶೀ ವಿಶ್ವೇಶ್ವರನ ಬಗ್ಗೆ ಹೇಳಿದ ಮಾತು ಮನನೀಯವಾಗಿದೆ :-

ಮೌಲೌ ಯಚ್ಚರಣಾಂಬು ಫಾಲಫಲಕೇ ಯಸ್ಯಾಂಘ್ರಿರೇಣುಃ ಕಥಾ
ಕರ್ಣೇ ವಾಚಿ ಯದೀಯ ನಾಮ ಹೃದಿ ಯದ್ರೂಪಂ ಯದಾಸ್ವಾದಿತಮ್ ॥
ಕುಕ್ಷೌ ಯತ್ತಪಸೇಽಪಟಂ ಕಟಿತಟಂ ವ್ಯಾಘ್ರಾಜನೇ ಸಂಸ್ಥಿತಿಃ
ಪಾದೌ ಯತ್ಪುರಚಾರಿಣೌ ಸ ಹಿ ಸದಾ ತತ್ಕಿಂಕರಃ ಶಂಕರಃ ॥

(ಯಾರ ತಲೆಯ ಮೇಲೆ ಯಾರ ಪಾದೋದಕವಿದೆಯೋ, ಯಾರ ಹಣೆಯಲ್ಲಿ ಯಾರ ಪಾದಧೂಳಿಯಿದೆಯೋ, ಯಾರ ಕಿವಿಯಲ್ಲಿ ಯಾರ ಕಥೆ ತುಂಬಿದೆಯೋ, ಯಾರ ನಾಲಿಗೆಯಲ್ಲಿ ಯಾರ ನಾಮ ನಲಿಯುತ್ತಿದೆಯೋ, ಯಾರ ಹೃದಯದಲ್ಲಿ ಯಾರ ರೂಪವಿದೆಯೋ, ಯಾರ ಹೊಟ್ಟೆಗೆ ಯಾರ ನೈವೇದ್ಯ ಸೇರಿದೆಯೋ, ಯಾರ ಟೊಂಕ ಬಟ್ಟೆಯಿಲ್ಲದೆ, ವ್ಯಾಘ್ರಚರ್ಮದಲ್ಲಿ ಸ್ಥಾಪನೆಗೊಳ್ಳುವುದು ಯಾರ ತಪಸ್ಸಿಗಾಗಿದೆಯೋ, ಯಾರ ಪಾದ ಯಾರ ಪುರಕ್ಕೆ ಸದಾ ಸಂಚರಿಸುವುದೋ ಆ ಶಂಕರ ಆ ವಿಷ್ಣುವಿಗೆ ಕಿಂಕರನಷ್ಟೆ)

ಹೀಗೆ ಶಿವನು ಪರಮವೈಷ್ಣವನೆಂದು ತಿಳಿದು ಎಲ್ಲ ಸಾತ್ವಿಕರು ಶಿವನಿಗೆ ಸೇವೆ ಸಲ್ಲಿಸುವರೆಂದು ತಿಳಿಯಬೇಕು. ಮಾ-ಮಂಜರಿ ಹೇಳುವ ಅಪ್ರಾಮಾಣಿಕವಾದ ಪರಶಿವನಿಗೆ ಯಾರೂ ಗೌರವ ತೋರುವುದಿಲ್ಲ. ಪರಶಿವನ ಬಗ್ಗೆ ಪ್ರಮಾಣವಿದೆಯೆಂದು ಮಾ-ಮಂಜರಿ ಹೇಳುವುದೆಲ್ಲ ಅನುಪಯುಕ್ತವೆಂದು ವೈಭವದಿಂದ ಸ್ಫುಟವಾಗಿದೆ. ಇದೇ ಸನ್ನಿವೇಶದಲ್ಲಿ ಭಗವದ್ಗೀತೆ ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ಹೇಳುವುದರಿಂದ, ಆ ಶ್ರೀಕೃಷ್ಣ ಶಿವಾಂಶವೆಂದು ಆಸೆಯಿಂದ ವಾದಿಸುವ ಮಾ-ಮಂಜರಿಯ ವಿಚಾರ ಹಾಸ್ಯಾಸ್ಪದವೆಂದೂ ಈ ವೈಭವಗ್ರಂಥ ದರ್ಶಿಗಳಿಗೆ ಸ್ಪಷ್ಟವಾಗಿರುತ್ತದೆ. ಹೀಗೆ ವಿಷ್ಣುವೇ ಸರ್ವೋತ್ತಮನಾದ್ದರಿಂದ ವೈಷ್ಣವ ಆಚಾರವೇ ಗ್ರಾಹ್ಯವೆಂದು ಮನಗಾಣಬಹುದು. ಇವೆಲ್ಲವನ್ನೂ ಸೂಚಿಸುವಂತೆ ಪಂಡಿತಾಚಾರ್ಯರು "ಗೋವಿಂದಂ" ಎಂದು ಮಣಿಮಂಜರಿಯ ಆದಿಯಲ್ಲಿ ನಿರ್ದೇಶಿಸಿದ್ದಾರೆಂದು ಈ ವೈಭವಗ್ರಂಥ ನಿರೂಪಿಸುತ್ತಿದೆ.

## ಶ್ರೀಪತಿ-ಸರ್ವಾಧಿಪತಿ

ವಿಷ್ಣುವು ಶ್ರೀಪತಿಯಾದ್ದರಿಂದ ಎಲ್ಲರಿಗೂ ಅಧಿಪತಿಯೆಂದು ತಿಳಿಸಲು, ಮಣಿಮಂಜರಿಯಲ್ಲಿ "ಶ್ರಿಯಃ ಪತಿಂ" ಎಂಬ ವಿಶೇಷಣ ಬಂದಿರುವುದೆಂದು ಗಮನಿಸಬಹುದು. ಅಂಭೃಣೀ ಸೂಕ್ತಾದಿಗಳಿಂದ ಶ್ರೀದೇವಿಯು ಬ್ರಹ್ಮ-ರುದ್ರಾದಿಗಳ ನಿಯಾಮಕಳೆಂದು ಸಮುದ್ರಶಾಯಿಯಾದ ಶ್ರೀಹರಿಯ ಅಧೀನಳೆಂದು ಸ್ಪಷ್ಟವಷ್ಟೆ. ಎಲ್ಲರೂ ಲಕ್ಷ್ಮೀದಾಸರಾದರೆ, ಆ ಲಕ್ಷ್ಮಿಯು ಹರಿದಾಸೆಯೆಂಬ ಸಂಗತಿ ಅಮೃತ ಮಥನ ಕಥೆಯಿಂದ ವೇದ್ಯವಾಗಿದೆ. ಅಲ್ಲಿ ರುದ್ರಾದಿ ಜೀವರಲ್ಲಿ

ದೋಷವಿರುವುದನ್ನು ಶ್ರೀಹರಿಯಲ್ಲಿ ನಿರ್ದೋಷತ್ವವನ್ನೂ ಲಕ್ಷ್ಮೀದೇವಿ ನಿರೂಪಿಸಿದ ವಿಷಯ ಭಾಗವತಾದಿ ಪ್ರಸಿದ್ಧವು.

ಹೀಗೆ ಮಣಿಮಂಜರಿಯಲ್ಲಿ ಪ್ರಥಮತಃ ಶ್ರೀಹರಿಯ, ನಂತರ ಶ್ರೀದೇವಿಯ ಉತ್ಕರ್ಷವನ್ನು ತಿಳಿಸುವ ರೀತಿಯಿಂದ ಆರಂಭವಾದ ಮೊದಲ ಪದ್ಯವು, ಈ ಜಗತ್ತಿನ ಮಾತಾ-ಪಿತೃಗಳಾದ ರಮಾ-ನಾರಾಯಣರ ನಂತರದ ಸ್ಥಾನ ಶ್ರೀವಾಯುದೇವರಿಗೆ ಮಾತ್ರ, ಎಂದು ತಿಳಿಸುವಂತೆ "ಶ್ರೀಮದಾನಂದತೀರ್ಥಾರ್ಯವಲ್ಲಭಂ" ಎಂಬುದಾಗಿ ಪ್ರವೃತ್ತವಾಗಿದೆ. ಶ್ರೀವಾಯುದೇವರ ಅನಂತರ ಅವರ ಶಿಷ್ಯರಾದ ಶಂಕರಾದಿ ದೇವತೆಗಳಿಗೆ ಮಹತ್ವವೆಂದು ತಾತ್ಪರ್ಯವು. ಆ ರುದ್ರದೇವರನ್ನು ಪ್ರಮಾಣಾನುಗುಣವಾಗಿ ಸೇವಿಸುವ ಕ್ರಮವನ್ನು ಈ ವೈಭವಗ್ರಂಥಕಾರರು ತಾವೇ ರಚಿಸಿದ ಈಶಾನಸ್ತುತಿ ಖಂಡನಾತ್ಮಕವಾದ ಮಾಧ್ವಸ್ತುತಿಯಿಂದ ಸಂಗ್ರಹಿಸಿದ ಶ್ಲೋಕಗಳು ಮನನೀಯವಾಗಿವೆ. ಹೀಗೆ ಶಂಕರಸ್ವರೂಪವನ್ನು ತಿಳಿದಾಗ, ಈ ಶಂಕರದೇವರೇ ಅದ್ವೈತಮತಪ್ರವರ್ತಕಶಂಕರಾಚಾರ್ಯರೆಂದಾಗಲು ಸಾಧ್ಯವಿಲ್ಲವೆಂದು ಸ್ಪಷ್ಟವಾದ್ದರಿಂದ, ಮಾ-ಮಂಜರಿಯಲ್ಲಿ ("ಶಿವ ಏವ ಶಂಕರಾಚಾರ್ಯಾತ್ಮನಾऽವತತಾರ") ಜೀವ ಬ್ರಹ್ಮೈಕ್ಯ ಸ್ಥಾಪನೆಗಾಗಿ ಶಿವನೇ ಶಂಕರಾಚಾರ್ಯನಾಗಿ ಅವತರಿಸಿದನೆಂದು ಹೇಳುವುದು ಅಯುಕ್ತವೇ ಆಗಿರುತ್ತದೆ. ಇದುವರೆಗೆ ಶಿವ ಸರ್ವೋತ್ತಮತ್ವದ ಶೈವ ವಾದವನ್ನು ಹೇಳುತ್ತಿದ್ದ ಈ ಮಾ-ಮಂಜರಿಕಾರನು, ಈಗ ತನ್ನ ಆ ವಾದಕ್ಕೆ ತಾನೇ ತರ್ಪಣಕೊಟ್ಟು ಅದ್ವೈತಕ್ಕೆ ತಿರುಗಿದ್ದು ಮೂರ್ಖತೆಯ ದ್ಯೋತಕವೂ ಆಗಿರುತ್ತದೆ. ದುರ್ವಾಸ-ಶುಕ-ಅಶ್ವತ್ಥಾಮ ಇತ್ಯಾದಿ ರೂಪಗಳಲ್ಲಿ ಮತ್ತು ಮೂಲರೂಪದಲ್ಲಿ ಶ್ರೀರುದ್ರದೇವರು ಭಾರತ-ಭಾಗವತಾದಿಗಳ ಮೂಲಕ ವಿಷ್ಣು-ಸರ್ವೋತ್ತಮತ್ವಾದಿ ಮಾಧ್ವೀಯ ಪ್ರಮೇಯಗಳನ್ನೇ ಹೇಳಿರುವಾಗ, ಅದಕ್ಕೆ ವಿರುದ್ಧವಾಗಿ ಜಗನ್ಮಿಥ್ಯಾತ್ವಾದಿವಿಷಯವನ್ನು ಹೇಳಿದ ಶಂಕರಾಚಾರ್ಯರು ಶಿವಾವತಾರವಾಗಲು ಹೇಗೆ ಸಾಧ್ಯ? ವಸ್ತುತಃ ಅಜ್ಞಾನ ಅನ್ಯಥಾಜ್ಞಾನಗಳ ಮೂಲವಾದ ಅದ್ವೈತಮತವನ್ನು ಪ್ರವರ್ತಿಸುವ ಶಂಕರಾಚಾರ್ಯರು ದೇವಾಂಶರೇ ಆಗಲು ಅರ್ಹರಾಗದಿರುವಾಗ ಶಿವಾಂಶ ಹೇಗಾದಾರು?

## ದೇವಾಂಶರಾಗಲು ಅರ್ಹತೆಯೇನು?

ಯಾವುದೇ ವ್ಯಕ್ತಿ 'ದೇವಾಂಶ' ಎಂದು ಗುಂಪು ಕಟ್ಟಿ ಕೂಗಿದ ಮಾತ್ರಕ್ಕೆ ದೇವಾಂಶ ಆಗಲಾರ. ಅದು ಅವರ ಜ್ಞಾನಸ್ವರೂಪಕ್ಕೆ ಅವಲಂಬಿಯಾಗಿದೆ. ಜೀವನು ಜ್ಞಾನ ಸ್ವರೂಪನಾದವನಷ್ಟೆ ಆ ಜ್ಞಾನ ಸಮೀಚೀನವಾದರೆ ಮಾತ್ರ ಅವನು ದೇವಾಂಶನಾಗಲು ಸಾಧ್ಯವಿರುತ್ತದೆ. ಆ ಜ್ಞಾನ ದೋಷಪೂರಿತವಾಗಿದ್ದರೆ ಅವರು ದೈತ್ಯಾಂಶ ಎಂದಾಗುತ್ತಾರೆ. ಈ ಹಿನ್ನೆಲೆಯಲ್ಲಿ ವಿಚಾರಮಾಡಿದಾಗ ಶಾಂಕರದರ್ಶನದಲ್ಲಿ ಪ್ರಮಾಣರಾಹಿತ್ಯ-ಪ್ರಮಾಣ ವಿರುದ್ಧತ್ವಾದಿ ದೋಷಗಳು ತುಂಬಿರುವ ಸಂಗತಿಗೆ ಅನುಗುಣವಾಗಿ ಶಂಕರಾಚಾರ್ಯರನ್ನು ದೈತ್ಯಾಂಶ ಎಂದೇ ನಿರ್ಧರಿಸಬಹುದು. ಇದಕ್ಕೆ ಹೆಚ್ಚಿನ ಪ್ರಮಾಣ ಬೇಕಾಗಿಲ್ಲ. ಆದರೆ ದೈತ್ಯರಲ್ಲಿ

ಇಂಥವನೇ (ಮಣಿಮಂತನೇ) ಆಗಿರುವನೆಂದು ನಿಶ್ಚಯಿಸಲು ಮಾತ್ರ ಪ್ರಮಾಣಬೇಕಾಗುತ್ತದೆ. ಅದು ಮುಂದೆ ಈ ಗ್ರಂಥದಲ್ಲಿ ವಿಶದವಾಗಿದೆ. ಹೀಗೆ ದೇವ-ದೈತ್ಯ ಸ್ವರೂಪದ ವಿವಾದಕ್ಕೆ ಪರಿಹಾರವಾಗಿ ಈ ವೈಭವಗ್ರಂಥದಲ್ಲಿ ಪಂಚನಾರ್ಥಕವಾಗಿದ್ದ ದರ್ಶನದ ದುಷ್ಟತ್ವ-ಅದುಷ್ಟತ್ವ ಗಳಿಂದ ದಾರ್ಶನಿಕನ ದೈತ್ಯ-ದೇವಾಂಶತ್ವವೆಂಬ ಎಲ್ಲರೂ ಒಪ್ಪುವ ಒಂದು ಸುಂದರ ಸೂತ್ರವನ್ನು ನಿರೂಪಿಸಿರುವುದು ಬಹು ಸುಂದರವಾಗಿದೆ. ವಂಚನಾರ್ಥವಾದ ಬೌದ್ಧದರ್ಶನದ ದುಷ್ಟತ್ವದಿಂದ ಬುದ್ಧರೂಪಿ ಶ್ರೀಹರಿಗೆ ದೋಷವಿರದಂತೆ ಈ ಸೂತ್ರ ಪಾತ್ರವಹಿಸಿದೆ.

## ಅದ್ವೈತದ ಅಪ್ರಾಮಾಣಿಕತೆ

ಜೀವ-ಬ್ರಹ್ಮೈಕ್ಯದಲ್ಲಿ ಯಾವುದೇ ಪ್ರಮಾಣವಿರುವುದಿಲ್ಲ. ಜೀವನು ಅಸರ್ವಜ್ಞ ನಾಗಿದ್ದಾನೆ. ಬ್ರಹ್ಮನು ಸರ್ವಜ್ಞನಾಗಿದ್ದಾನೆ. ಈ ಅಸರ್ವಜ್ಞ-ಸರ್ವಜ್ಞನಿಗೆ ಐಕ್ಯ ಹೇಗೆ ಸಾಧ್ಯ? ಕತ್ತಲೆ-ಬೆಳಕು ಎರಡೂ ಒಂದಾಗಲು ಸಾಧ್ಯವಿಲ್ಲವಷ್ಟೆ ಆದ್ದರಿಂದ ಈ ಐಕ್ಯವಾದಕ್ಕೆ ಅನುಭವದ ನೆಲೆಯಿಲ್ಲ. ವಿರುದ್ಧ ಧರ್ಮ ಹೊಂದಿದವರು ಒಂದೇ ಎಂದಾಗಲಾರರೆಂದು ಯುಕ್ತಿಯೂ ಈ ವಾದಕ್ಕೆ ಸಹಕಾರಿಯಾಗದು. ಅದಕ್ಕೇ ಅನುಭವ-ಯುಕ್ತಿಗಳಿಗೆ ವಿರುದ್ಧವೂ ಆದ ಈ ವಾದಕ್ಕೆ ಆಗಮವೂ ಪ್ರಮಾಣವಾಗದು. 'ತತ್ವಮಸಿ' ಇತ್ಯಾದಿ ವಾಕ್ಯಗಳು ಪ್ರಮಾಣವೆಂದು ವಾದಿಸ ಹೊರಟರೆ, ಅದಕ್ಕೆ ನ್ಯಾಯಸುಧಾ-ನ್ಯಾಯಾಮೃತಾದಿ ಗ್ರಂಥಾನುಸಾರವಾಗಿ ಈ ವೈಭವ ಗ್ರಂಥವು ಭೇದವಾದನ್ನು ಸಮರ್ಥಿಸುವುದು ಹೃದಯಂಗಮವಾಗಿದೆ. ಅದರಲ್ಲಿ 'ಅತತ್-ತ್ವಮಸಿ' ಎಂದು ಪದ ಛೇದಿಸಿ ಲಕ್ಷಣಾ ಇಲ್ಲದಂತೆ ಅರ್ಥ ಉಪಪನ್ನವಾಗುವಾಗ ಲಕ್ಷಣಾಶ್ರಯಣ ಅನವಶ್ಯಕತೆ ಜಹದಜಹಲ್ಲಕ್ಷಣಾವೃತ್ತಿಯ ಅಪ್ರಾಮಾಣಿಕತೆ, ಏಕಪದಮಾತ್ರ ಲಕ್ಷಣದಿಂದ ವಾಕ್ಯಾರ್ಥ ಉಪಪನ್ನವಾಗುವಾಗ ಪದದ್ವಯಲಕ್ಷಣಾದ ಅನವಶ್ಯಕತೆ, ಇತ್ಯಾದಿ ದೋಷಗಳು ಅದ್ವೈತವಾದಕ್ಕೆ ಸ್ಪಷ್ಟವಾಗಿರುತ್ತವೆ. ಇದಲ್ಲದೆ, ಸರ್ವ ಅಲ್ಪ ಎಂಬ ವಿಶೇಷಣವಿಶೇಷಣವನ್ನು ಮಾತ್ರ ಬಿಟ್ಟು ಜ್ಞಾನ ವಿಶಿಷ್ಟ ವಸ್ತುವಿಗೆ ಐಕ್ಯವೆಂದು ಅರ್ಥೈಸಬಹುದಾದ್ದರಿಂದ ಅಖಂಡ ಚಿದೈಕ್ಯವಾದ ನಿರಾಧಾರವೇ ಸರಿ. ಅಧಿಕ ವಿಷಯಗಳನ್ನೆಲ್ಲ ವಾದಗ್ರಂಥಗಳಲ್ಲಿ ಮನಗಾಣಬಹುದೆಂದು ಇದನ್ನು ಹೆಚ್ಚು ವಿಸ್ತರಿಸಲಾರೆ. ಇಲ್ಲಿ ಅವಶ್ಯಕವೆನಿಸುತ್ತಿಲ್ಲ.

ಆದ್ದರಿಂದ ಈ ಅಪ್ರಾಮಾಣಿಕ-ಪ್ರಮಾಣವಿರುದ್ಧ ದುಷ್ಟ ಅದ್ವೈತಮತವನ್ನು ಮಾಡಿದ್ದರಿಂದ ಆ ಅದ್ವೈತಾಚಾರ್ಯರು ಮಣಿಮಂತನೆಂಬ ದೈತ್ಯನೆಂದು ಮಣಿಮಂಜರಿಯಲ್ಲಿ ಪ್ರತಿಪಾದಿಸಿದ್ದು ಸಮರ್ಥನೀಯವೇ ಆಗುತ್ತದೆ. ಇದರಂತೆ ಪ್ರಮಾಣಾನುಗುಣವಾದ ದ್ವೈತಮತಸ್ಥಾಪಕರಾದ ಶ್ರೀಮತ್ ಆನಂದತೀರ್ಥರು ದೇವತಾಸ್ವರೂಪರೆಂದೇ ನಿಶ್ಚಿತವಾಗುತ್ತದೆ. ಯಾವ ದೇವತೆಯೆಂದು ವಿಶೇಷವಾಗಿ ತಿಳಿಯಲು ಆಗಮಗಳು ಸಹಕರಿಸುತ್ತವೆ. ಆ ಆಗಮಗಳಿಂದ ಶಿವಾದಿಗಳಿಗಿಂತಲೂ ಉತ್ತಮರಾದ ವಾಯುದೇವರೇ ಶ್ರೀಮದಾಚಾರ್ಯ ರೆಂದು ತಿಳಿಯುವುದನ್ನು ಸೂಚಿಸಲು 'ಆರ್ಯ' 'ವಲ್ಲಭಂ' ಎಂದು ಹೇಳಲಾಗಿದೆ. ಪರಮಾತ್ಮನ

ನಂತರ ಸ್ಥಾನದಲ್ಲಿ ವಾಯು ಅವತಾರರಾದ ಶ್ರೀಮತ್ ಆನಂದತೀರ್ಥರಿಗಿಂತ ಬೇರೆ ವ್ಯಕ್ತಿಗಳು ಇರುವುದಾದರೆ ಆಗ ಅವರಿಗೆ ಶ್ರೀಹರಿಗೆ ವಲ್ಲಭನಾಗುತ್ತಿದ್ದ. ಅವರೇ ಆರ್ಯ ಎಂದು ಎನಿಸುತ್ತಿದ್ದರು. ಆದರೆ ಆ ವ್ಯಕ್ತಿಗಳಾರೂ ಇಲ್ಲ. ಆದ್ದರಿಂದ ಶ್ರೀಹರಿಯು ಶ್ರೀಮತ್ ಆನಂದತೀರ್ಥ-ಆರ್ಯರಿಗೇ ವಲ್ಲಭನೆಂದು ಈ ಮಾತಿನಹಾರ್ದವು. ಇದನ್ನು ತಿಳಿಸಿದ ನಂತರ ವಾಯುದೇವರಿಗೆ ಶಿವಾದಿಗಳಿಗಿಂತ ಪರತ್ವವನ್ನು ಸಮರ್ಥಿಸಲು ಅನೇಕ ಪ್ರಮಾಣವಾಕ್ಯಗಳ ಉದಾಹರಣೆ ಈ ವೈಭವದಲ್ಲಿ ಬಂದಿರುತ್ತದೆ.

## ವಾಯು ಜೀವೋತ್ತಮತ್ವ

1. ವಾಯೋರ್ವಾವ ರುದ್ರ ಉದೇತಿ । ವಾಯೌ ವಿಲೀಯತೇ ।
   ತಸ್ಮಾದಾಹುರ್ವಾಯುರ್ದೇವಾನಾಂ ಶ್ರೇಷ್ಠ ಇತಿ ॥
2. ವಾಯುನಾ ಹಿ ಸರ್ವಾಣಿ ಭೂತಾನಿ ನೇನೀಯಂತೇ ।
3. ಸ ಪ್ರಾಣಮಸೃಜತ । ಪ್ರಾಣಾತ್ ಶ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ
   ಪೃಥಿವೀಂದ್ರಿಯಂ ಮನೋ....... ಅಸೃಜತ ।
4. ಪ್ರಾಣೋ ವಾಯುರಿತಿ ಪ್ರೋಕ್ತಸ್ತತ್ಪತ್ನೀ ನಾಮ ಭಾರತೀ ॥
   ರೂಪಂ ತು ತತ್ಸುತೋ ರುದ್ರೋ ವಶೇ ಪ್ರಾಣಸ್ಯ ತದ್ವಯಮ್ ॥
5. ಬಲಮಿಂದ್ರಸ್ಯ ಗಿರಿಶಃ ಗಿರಿಶಸ್ಯ ಬಲಂ ಮರುತ್ ।
   ಮರುತಸ್ತು ಹರಿಃ ಸಾಕ್ಷಾತ್ ನ ಹರೇರ್ಬಲಮನ್ಯತಃ ॥

ಇತ್ಯಾದಿಗಳು ವಾಯು ಜೀವೋತ್ತಮತ್ವಕ್ಕೆ ಸಾಧಕಗಳಾಗಿವೆ. ಇದರ ವಿಸ್ತಾರವಿವೇಚನೆಯು ಶ್ರೀ ಕಾಶೀ ತಿಮ್ಮಣಾಚಾರ್ಯರ 'ವಾಯುಪರತ್ವಂ' ಎಂಬ ಗ್ರಂಥದಲ್ಲಿ ಅತ್ಯಂತ ಸ್ಫುಟವಾಗಿದೆ. ಈ ಗ್ರಂಥ ಇತ್ತೀಚೆಗೆ ನನ್ನ ಸಂಪಾದನೆಯಲ್ಲಿ ಅನುವಾದಸಹಿತವಾಗಿ ಮುದ್ರಿತವಾಗಿದ್ದು ವಾಯುದೇವರ ಮಹತ್ವ ತಿಳಿಯಲು ಸಹಕಾರಿಯಾಗಿದೆ.

ಮಧ್ವಾಚಾರ್ಯರು ವಾಯು ಅವತಾರರು

ಈ ವಿಷಯಕ್ಕೂ ಸಹ ಈ ವೈಭವದಲ್ಲಿ ಉದಾಹರಿಸಿರುವ ಪ್ರಮಾಣವಾಕ್ಯಗಳು ಹೀಗಿವೆ.

1. ಬಳಿತ್ಥಾ ತದ್ವಪುಷೇಽಧಾಯಿ.............
2. ವಿದ್ವಾನ್ ಮಧ್ವಃ ಉಜ್ಜಭಾರ ದೃಶೇಕಮ್ ।
3. ಮಧ್ವೋ ವೋ ನಾಮ ಮಾರುತಂ ಯಜತ್ರಾಃ
4. ಅಜೀತಯೇ ಅಹತಯೇ ಪವಸ್ವ ಸ್ವಸ್ತಯೇ ಸರ್ವತಾತಯೇ ಬೃಹತೇ ।
5. ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ । ಇತ್ಯಾದಿಗಳು

ಇದಲ್ಲದೆ, ಸಾಕ್ಷಾತ್ ಶ್ರೀಮದಾಚಾರ್ಯರೇ ತಾವು ವಾಯುದೇವರ ಅವತಾರವೆಂದು ನಿರೂಪಿಸಿರುತ್ತಾರೆ.

''ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ॥
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ
ಮಧ್ವೋ ಯತ್ತು ತೃತೀಯಮೇತದಧುನಾ ಗ್ರಂಥಃ ಕೃತಃ ಕೇಶವೇ ॥'' ಎಂದು

ಇದನ್ನು ವಿದ್ಯಾರಣ್ಯರು ಸರ್ವದರ್ಶನ ಸಂಗ್ರಹದಲ್ಲಿ ಉದಾಹರಿಸಿ ಖಂಡಿಸಲಾಗದೆ ಸುಮ್ಮನಿರುತ್ತಾರೆ. ಆದ್ದರಿಂದ ಮಧ್ವಾಚಾರ್ಯರ ಬಗ್ಗೆ ಮಾ-ಮಂಜರಿಕಾರಾದಿ ಆಧುನಿಕ ದುರಾಗ್ರಹಿಗಳಾಡುವ ಕೀಳು ಮಾತಿಗೆ ಯಾವ ಬೆಲೆಯೂ ಇರುವುದಿಲ್ಲ.

## ಜೀವತ್ರೈವಿಧ್ಯವಾದಕ್ಕೆ ಉಪಯುಕ್ತ ವಿಚಾರ

ಹೀಗೆ ಮಧ್ವಾಚಾರ್ಯರು ವೇದಪ್ರತಿಪಾದ್ಯ ಜೀವೋತ್ತಮ ವಾಯುದೇವರೆಂಬುದು, ಮಧ್ವಾಚಾರ್ಯರ ಕಾಲದಿಂದಲೂ ಪ್ರಸಿದ್ಧವಾದ ಸಂಗತಿಯಾಗಿದೆ. ಇದು ಜಗತ್‌ಸತ್ಯತ್ವ - ಪಂಚಭೇದ-ತಾರತಮ್ಯ-ಜೀವತ್ರೈವಿಧ್ಯ ಇತ್ಯಾದಿ ಮಾಧ್ವಸಿದ್ಧಾಂತಕ್ಕೆ ಉಪಯುಕ್ತವಾದ ವಿಷಯವಾಗಿದೆ. ಆದರೆ ಮಧ್ವಾಚಾರ್ಯರು ದೇವಾಂಶರಾದಂತೆ ತಮ್ಮ ಮತಾಚಾರ್ಯರನ್ನೂ ಅಟ್ಟಕ್ಕೆ ಏರಿಸಬೇಕೆಂದು ಆಸೆ ಪಟ್ಟು ಶಂಕರರನ್ನು ಶಂಕರಾವತಾರಿಯಾಗಿ ಚಿತ್ರಿಸಲು ಹೊರಟ ಈ ಮಾ-ಮಂಜರೀಕಾರಾದಿಗಳು ಜಗನ್ಮಿಥ್ಯಾತ್ವ-ನಿರ್ಗುಣಬ್ರಹ್ಮವಾದಾದಿ ಶಾಂಕರಮತ ಪ್ರಕ್ರಿಯೆಗೆ ಕಿಂಚಿತ್ತೂ ಉಪಯುಕ್ತವಾಗದೆ ವ್ಯರ್ಥ ಕಸರತ್ತು ಮಾಡುವಂತಾಗಿದೆ. ಇದಲ್ಲದೆ, ಜೀವತ್ರೈವಿಧ್ಯವಾದದಲ್ಲಿ ಮಾತ್ರ ಈ ದೇವ-ದೈತ್ಯಾದಿ ವಿಚಾರ ಅರ್ಥಪೂರ್ಣವಷ್ಟೆ ಅದನ್ನು ಒಪ್ಪಿ ಈ ವಿಚಾರ ಮಾಡಿದರೆ, ಆಗ ಈ ವಾದಸ್ಥಾಪಿಸಿದ ಶ್ರೀಮಧ್ವಾಚಾರ್ಯರ ಕಾಲಿಗೆ ಶಾಂಕರರೂ ಬಿದ್ದಂತೆಯೇ ಸರಿ. ಮಧ್ವಾಚಾರ್ಯರ ಕಾಲಿಗೆ ಬಿದ್ದು ಅವರನ್ನು ದೈತ್ಯರೆಂದು ಹೇಳಲು ಹೊರಟರೆ ಆಗ ಈ ಶಾಂಕರರು ಏನಾಗುತ್ತಾರೆ? ಇದಾವುದರ ಪರಿಜ್ಞಾನವೂ ಇಲ್ಲದೆ, ಮಾ-ಮಂಜರೀ ಪ್ರವೃತ್ತಿ ಹಾಸ್ಯಾಸ್ಪದವಷ್ಟೆ

## ವೇದಪ್ರತಿಪಾದ್ಯ ಜಗದ್ಗುರುಗಳಾರು?

ವಾಯುಸ್ತುತಿಯಲ್ಲಿ ''ಶ್ರುತಿಶತಮಿತಿಹಾಸಾದಿ ಚಾಕರ್ಣಯಾಮಃ'' ಎಂದು, ಮಧ್ವ ವಿಜಯದಲ್ಲಿ ''ತಾಂ ಮಂತ್ರವರ್ಣೈರನುವರ್ಣನೀಯಾಂ'' ಎಂಬುದಾಗಿಯೂ, ಮಧ್ವಾ ಚಾರ್ಯರಿಗೆ ವೇದ ಪ್ರತಿಪಾದ್ಯ ಜಗದ್ಗುರುತ್ವವನ್ನು ಹೇಳಿದ್ದಕ್ಕೆ ಪ್ರತಿಯಾಗಿ, ಮಾ-ಮಂಜರೀ ಕಾರನೂ ಸಹ ರುದ್ರಾಧ್ಯಾಯದಲ್ಲಿ ಬರುವ ''ನಮೋ ವ್ಯುಪ್ತಕೇಶಾಯ'' ಎಂಬ ಪದದಿಂದ

ಶಂಕರಾಚಾರ್ಯರೂ ವೇದಪ್ರತಿಪಾದ್ಯರೆಂದು ಹೇಳುವ ಸಾಹಸವಿದೆ. ''ವ್ಯುಪ್ತಕೇಶ'' ಎಂದರೆ ''ಮುಂಡಿತಕೇಶ'' ಎಂದು ವಿದ್ಯಾರಣ್ಯಭಾಷ್ಯದ ಅರ್ಥವಂತೆ. ಇಲ್ಲಿ ಶಿರಸ್ಸು ಮುಂಡಿತ ವಾಗು ವುದೋ, ಕೇಶ ಮುಂಡಿತವಾಗುವುದೋ ಇದು ತಲೆ ಇದ್ದವರಿಗಷ್ಟೇ ಗೊತ್ತಾಗುವ ಸಂಗತಿಯು ಆದಿರಲಿ.

ಈ ಖಂಡಿತಕೇಶನೆನಿಸಿದ ಯತಿಯು ಶಂಕರಾಚಾರ್ಯರೇ ಎಂದು ಈ ಮಾ-ಮಂಜರೀ ಕಾರನಿಗೆ ಹೇಗೆ ಹೊಳೆಯಿತೋ ಗೊತ್ತಿಲ್ಲ. ರುದ್ರಾವತಾರರಾದ ಯತಿಗಳಾದ ದೂರ್ವಾಸರಲ್ಲಿ ಇದರ ಸಮನ್ವಯವಾಗುವಾಗ ಶಂಕರಾಚಾರ್ಯರೇ ಈ ವ್ಯುಪ್ತಕೇಶನೆಂಬ ವಾದ ಅರ್ಥಹೀನ. ದೂರ್ವಾಸರ ವೈಷ್ಣವತ್ವವು ಭಾಗವತಪ್ರಸಿದ್ಧವಾಗಿದೆ.

ವಸ್ತುತಃ ವ್ಯುಪ್ತಕೇಶ ಎಂದರೆ ವೀರಭದ್ರಸೃಷ್ಟಿಕಾಲದಲ್ಲಿ ಕೂದಲು ಕಿತ್ತಿ ನೆಲಕ್ಕಪ್ಪಳಿಸಿದ ಪಶುಪತಿಯೇ ಆಗುವಾಗ ವಿದ್ಯಾರಣ್ಯಭಾಷ್ಯದ ಅರ್ಥವೇ ಗ್ರಾಹ್ಯವೆಂದಾಗಲು ನಿಯಾಮಕವಿಲ್ಲ. ಆದ್ದರಿಂದ ಯತಿರೂಪದ ಪ್ರಸಕ್ತಿಯೇ ಇಲ್ಲ. ಶ್ರೀ ಸತ್ಯಧರ್ಮತೀರ್ಥರು ರುದ್ರಾಧ್ಯಾಯವನ್ನು ಶ್ರೀರಾಮ-ಕೃಷ್ಣ ಪರನೆಂದು ಸಮರ್ಥಿಸುವ ರೀತಿ ಅರ್ಥವಾದರೆ ಈ ವಿಚಾರಕ್ಕೆ ಆಸ್ಪದವೇ ಇಲ್ಲ.

ಇದರಂತೆ 'ಉಪಹ್ವಯೇ ಸುದುಘಾಂ' ಎಂಬ ಋಗ್ವೇದದ ವಾಕ್ಯದಿಂದ ಶಂಕರಾಚಾರ್ಯರು ಶಿವಾವತಾರವೆಂದು ಹೇಳುವುದು ಅಸಂಬದ್ಧವಾಗಿದೆ. ಹಿಂದೆ 'ವ್ಯುಪ್ತಕೇಶ' ಶಬ್ದಕ್ಕೆ ವಿದ್ಯಾರಣ್ಯಭಾಷ್ಯಕ್ಕೆ ಶರಣಾಗಿ ಅರ್ಥೈಸಿದ ಈ ಮಾ-ಮಂಜರಿಕಾರನು, ಇಲ್ಲಿ ವಿದ್ಯಾರಣ್ಯಗುರುವಾಗಿ ವರ್ತಿಸುವ ಬಗೆ ನಗೆ ತರಿಸುತ್ತಿದೆ. ಈ ವೇದವಾಕ್ಯ ಶಂಕರಾಚಾರ್ಯರನ್ನು ಹೇಳುವ ವಿಚಾರ ವಿದ್ಯಾರಣ್ಯಭಾಷ್ಯಕ್ಕೆ ಸಮ್ಮತವಾಗಿಲ್ಲ. ಬಹುಶಃ ಇದು ವಿದ್ಯಾರಣ್ಯರಿಗೂ ಗೊತ್ತಾಗಿಲ್ಲ! ಇಲ್ಲಿ 'ಸುಹಸ್ತಃ' ಎಂಬುದನ್ನು ಸು-ಶಂ, ಹಸ್ತ-ಕರ ಎಂದು ಶಂಕರ ಪರವಾಗಿ ಯೋಜಿಸುವ ರೀತಿ 'ಶಂಕರ' ಶಬ್ದಾರ್ಥಕ್ಕೆ ಅನನುಗುಣವಾಗಿದೆ. ಇದೆಲ್ಲ ಮಾ-ಮಂಜರಿಕಾರನಿಗೆ ತಿಳಿಯಂತಾಗಿರುವುದು ಶಂಕರಾಚಾರ್ಯರ ಅನುಗ್ರಹವೇ ಸರಿ.

ಅಪ್ಪಯ್ಯದೀಕ್ಷಿತ - ವಿದ್ಯಾರಣ್ಯಾದಿಗಳ ಗ್ರಂಥಗಳಲ್ಲಿ ಶಂಕರಾಚಾರ್ಯರ ಶಿವಾವತಾರತ್ವ ವೇದದಿಂದ ಪ್ರತಿಪಾದ್ಯವಾಗಿ ಬರದಿರುವುದರಿಂದ, ಶಂಕರಾಚಾರ್ಯರ ಶಿವಾವತಾರತ್ವವನ್ನು ವೇದದಿಂದ ತೋರಿಸಬೇಕೆಂಬುದು ಶಾಂಕರರಲ್ಲಿ ಇಲ್ಲವೆಂದು ನಿಶ್ಚಯಿಸಬಹುದು. ಇದು ಕೇವಲ ಆಧುನಿಕರ ಕುಚೋದ್ಯವು. ಇದಕ್ಕೆ ಅನುಗುಣವಾದ ಟುಪ್‌ಶ್ಲೋಕಗಳೆಲ್ಲ ಶಂಕರಾಚಾರ್ಯರ ನೈಜ ಸ್ವರೂಪವನ್ನು ಮೋಹಿಸಲೆಂದೇ ಬಂದಿರುತ್ತವೆ.

## ಶಂಕರಾಚಾರ್ಯರು ದೈತ್ಯರೆಂದು ರಾಘವೇಂದ್ರಸ್ವಾಮಿಗಳ ಸಮರ್ಥನೆ

ಎರಡು ರೀತಿಯಿಂದ ಶಂಕರಾಚಾರ್ಯರು ದೈತ್ಯ ಎಂದು ಸಮರ್ಥನೆಯಾಗುತ್ತದೆ. ಹಿಂದೆ ಹೇಳಿದಂತೆ ದರ್ಶನದ ದುಷ್ಟತ್ವದಿಂದ ಹಾಗೂ ಶ್ರೀ ರಾಘವೇಂದ್ರಸ್ವಾಮಿಗಳು

ಭಗವದ್ಗೀತೆಯಲ್ಲಿ ದೈತ್ಯಲಕ್ಷಣ ಸಮನ್ವಯವನ್ನು ಅದ್ವೈತಾಚಾರ್ಯರಿಗೆ ಮಾಡುವುದರಿಂದ ಇದು ಸ್ಪಷ್ಟವಾಗಿದೆ. ದೇವಾಂಶರೆಂದು ತ್ರಿಮತಸ್ಥರಿಗೆ ಮಾನ್ಯರಾದ ಶ್ರೀ ರಾಘವೇಂದ್ರ ಸ್ವಾಮಿಗಳು ಅದ್ವೈತಾಚಾರ್ಯರಾದ ಶಂಕರಾಚಾರ್ಯರನ್ನು ತಾವಾಗಿಯೇ ದೈತ್ಯರೆಂದು ಹೇಳಬಹುದಿತ್ತು. ಆದರೆ ಅದು ಮಾ-ಮಂ ಕಾರರಂಥವರ ಅಮಾರ್ಗದ ಕೆಲಸದಂತೆ ಭ್ರಮೆ ಬರುವುದರಿಂದ ಹಾಗೆ ಮಾಡದೆ, ಗೀತೆಯಲ್ಲಿ ಹೇಳಿದ ಆಸುರ ಲಕ್ಷಣ ಸಮನ್ವಯದಿಂದ ನಿರೂಪಿಸಿರುತ್ತಾರೆ. ಅದರ ಪೂರ್ಣಪಾಠ ಈ ವೈಭವಗ್ರಂಥದಲ್ಲಿ ಬಂದಿದೆ. ಸಾರಾಂಶವೇನೆಂದರೆ :-

> ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ॥
> ಅಪರಸ್ಪರ ಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥

ಎಂದು ಗೀತೆಯಲ್ಲಿ ಜಗತ್ತನ್ನು ಸತ್ಯವಲ್ಲ ಮಿಥ್ಯೆಯೆಂದು, ಜ್ಞಾನಬಾಧ್ಯವೆಂದು, ಸದಸದ್ವಿಲಕ್ಷಣ ವೆಂದು, ಆವಿದ್ಯಕವೆಂದು ಹೇಳುವರೇ ದೈತ್ಯರೆಂದು ಹೇಳಲಾಗಿದೆ. ಈ ಲಕ್ಷಣವೆಲ್ಲ ಶಂಕರಾ ಚಾರ್ಯರದೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಈ ದೈತ್ಯರು ಆಸುರೀಯೋನಿಯಲ್ಲಿ ಅಂದರೆ ವ್ಯಭಿಚಾರ ಜಾತಶರೀರದಲ್ಲಿ ಬರುವರೆಂದು ರಾಘವೇಂದ್ರಸ್ವಾಮಿಗಳು ಹೇಳಿರುತ್ತಾರೆ.

## ಯಾವ ದೈತ್ಯ ?

ದೈತ್ಯ ಎಂದು ಸಾಮಾನ್ಯತಃ ತಿಳಿದ ಮೇಲೆ ಮಣಿಮಂತನೆಂಬ ವಿಶೇಷತೆಯ ನಿರ್ಣಯಕ್ಕೆ ಅನೇಕ ಆಗಮಗಳು ಸಹಕಾರಿಯಾಗಿವೆ. ಅದನ್ನು ಈ ವೈಭವದಲ್ಲಿ ಸಂಗ್ರಹಿಸಿ ಕೊಡಲಾಗಿದೆ.

> ಮಣಿಮತ್‌ಪೂರ್ವಕಾ ದುಷ್ಟಾ ದೈತ್ಯಾ ಆಸನ್ ಕಲೌ ಯುಗೇ ।
> ತೇ ಕುಶಾಸ್ತ್ರಂ ಪ್ರಕುರ್ವಂತೋ ಹರಿವಾಯುವಿರೋಧಿನಃ ॥
> ತೇಷಾಂ ಮಧ್ಯೇ ಸಂಕರಸ್ತು ಪೂರ್ವಂ ಯೋ ಮಣಿಮಾನ್ ಖಲಃ ॥
> ಸೌಗಂಧಿಕವನೇ ದಿವ್ಯೇ ಭೀಮಸೇನ ಹತೋಽಸುರಃ ।
> ಸ ಕ್ರೋಧತಂತ್ರಕೋ ದುಷ್ಟೋ ಮಿಥ್ಯಾಶಾಸ್ತ್ರಂ ವದನ್ ಪುಃ ॥
> ಕೃಷ್ಣೇ ಭೀಮೇ ಚ ವಿದ್ವೇಷಂ ಕುರ್ವನ್ ಭೂಮಾವಜಾಯತ ।
> ಕಾಲಡಿ ಗ್ರಾಮಕೇ ರುದ್ರವರಾಲ್ಲೋಕಾನ್ ವಿಮೋಹಯನ್ ॥

(ಮಣಿಮಂತನೇ ಮೊದಲಾದ ದುಷ್ಟದೈತ್ಯರು ಹರಿ-ವಾಯುವಿರೋಧಿಗಳಾಗಿ ಕೆಟ್ಟ ಮತಗಳನ್ನು ಮಾಡುತ್ತ ಕಲಿಗಾಲದಲ್ಲಿದ್ದರು. ಹಿಂದೆ ಮಣಿಮಂತನೆಂಬ ಯಾವ ಖಳನು ದಿವ್ಯ ಸೌಗಂಧಿ ಕಾವನದಲ್ಲಿ ಭೀಮಸೇನ ಹತನಾದ ಅಸುರನಿದ್ದನೇ ಅವನೇ ಸಂಕರನು. ರುದ್ರವರದಿಂದ ಜಗವನ್ನೆಲ್ಲ ಮೋಹಿಸುತ ಆ ಕ್ರೋಧವಶ ದೈತ್ಯನು ಮತ್ತೆ ಮಿಥ್ಯಾಮತವನ್ನು ಹೇಳುತ್ತ, ಕೃಷ್ಣ-ಭೀಮರನ್ನು ದ್ವೇಷಿಸುತ್ತ ಭೂಮಿಯಲ್ಲಿ ಕಾಲಡಿಗ್ರಾಮದಲ್ಲಿ ಹುಟ್ಟಿದನು).

ಹೀಗೆ ಮಣಿಮಂಜರಿಯಲ್ಲಿ ಶಂಕರಾಚಾರ್ಯರ ಜೀವಸ್ವರೂಪವನ್ನು ಮಣಿಮಂತನೆಂಬ ದೈತ್ಯ ನೆಂದು ನಿರೂಪಿಸಿದ್ದು ಪ್ರಮಾಣಾನುಗುಣವಾಗುತ್ತದೆ. ಭಗವದ್ಗೀತಾದಿಗಳಿಗೆ ಸಮ್ಮತವಾಗಿರುತ್ತದೆ.

## ಮಧ್ವಾಚಾರ್ಯರ ಬಗ್ಗೆ ಈ ವಿಚಾರವಾಗದು

ಮಧ್ವಾಚಾರ್ಯರ ಬಗ್ಗೆ ಮಾ-ಮಂಜರೀಕಾರಾದಿಗಳು ಮಧು-ಕ್ರೋಧ ಇತ್ಯಾದಿ ದೈತ್ಯಾಂಶ ಎಂದು ಆಕ್ಷೇಪಿಸುತ್ತ ಪುರಾಣಗಳನ್ನು ಛಾಪಿಸಿರುವುದು ಅಪ್ರಮಾಣಿಕವಾಗಿದೆ. ಭಗವದ್ಗೀತಾದಿಗಳಿಗೆ ಅನುಗುಣವಾಗಿಲ್ಲವಾದ್ದರಿಂದ, ಮಾಧ್ವಮತದಲ್ಲಿ ದೋಷವನ್ನು ತೋರಿಸ ಲಾಗದಿರುವುದರಿಂದ ಶ್ರೀಮಧ್ವಾಚಾರ್ಯರು ದೇವಸ್ವರೂಪಕ್ಕೆ ಅನುಗುಣವೆಂದು ಗೀತೆಯಲ್ಲಿ ನಿರೂಪಿತವಾದ ಕೃಷ್ಣಭಕ್ತ್ಯಾದಿಗುಣಮಂಡಿತರಾದ್ದರಿಂದ,ಶ್ರುತಿಸಿದ್ಧಾಂತ ಸಮರ್ಥನ ಮಾಡಿದ್ದ ರಿಂದ, ಜಗತ್‌ಸತ್ಯತ್ವವಾದಿಗಳಾದ್ದರಿಂದ, ಯಾವ ರೀತಿಯಿಂದಲೂ ಮಧ್ವಾಚಾರ್ಯರಲ್ಲಿ ದೈತ್ಯಭಾವವು ಸಿದ್ಧವಾಗದು. ಆದ್ದರಿಂದ ಮಾಧ್ವರು ಶಂಕರಾಚಾರ್ಯರನ್ನು ಕಂಡಂತೆ ಶಾಂಕರರು ಮಾಧ್ವಾಚಾರ್ಯರನ್ನು ಕಾಣುವುದು ಸಮವಾಗಿದೆಯೆಂದು ತಿಳಿಯುವುದು ತಪ್ಪಾಗುತ್ತದೆ.

## ಜ್ಯೋತಿಷಶಾಸ್ತ್ರದಿಂದ ವಿವಾದಪರಿಹಾರ

ನಾಡೀಗ್ರಂಥಗಳಲ್ಲಿ ಭವಿಷ್ಯತ್ತಿನ ವಿಚಾರಗಳು ಬಂದಿರುತ್ತವೆ. ಅದರಲ್ಲಿ ಚತುರ್ಮುಖ ನಾಡೀ ಗ್ರಂಥದಲ್ಲಿ ಶಂಕರಾಚಾರ್ಯರ-ಮಧ್ವಾಚಾರ್ಯ ಇವರಿಬ್ಬರ ವಿಚಾರ ಬಂದಿರುವುದನ್ನು ಶ್ರೀ ನಾಗರಾಜಶರ್ಮಾ ಎಂಬ ಪ್ರಾಚೀನ ಪಂಡಿತರು ಉಲ್ಲೇಖಿಸಿರುತ್ತಾರೆ. ಅದು ವೈಭವಗ್ರಂಥ ದಲ್ಲಿ ಮತ್ತೆ ವ್ಯಕ್ತವಾಗಿದೆ. ಇದರಿಂದ ಶಾಂಕರ ಜಾತಕದಲ್ಲಿ ಪರಜಾತಯೋಗ (ವ್ಯಭಿಚಾರ ಜನನ) ಶನಿದೃಷ್ಟಿಯ ಪ್ರಭಾವ ಇತ್ಯಾದಿಗಳು ಗೊತ್ತಾಗುತ್ತವೆ. ಶಂಕರಾಚಾರ್ಯರ ದೈತ್ಯಸ್ವರೂಪ ಸ್ಪಷ್ಟವಾಗುತ್ತದೆ. ಇದಲ್ಲದೆ, ಶನಿವಕ್ಕರಿಸಿದ್ದರಿಂದ ಮಧ್ವನಿಂದಾಪರವಾಗಿ ಪುರಾಣಕಲ್ಪಿಸುವ ಶಾಸ್ತ್ರಿಗಳೆಲ್ಲ ಮುಂದೆ ಹುಟ್ಟುವ ವಿಚಾರವೂ ಅಲ್ಲೇ ಬಂದಿದೆ. ಆ ಮಾಧ್ವನಿಂದಕರೂ ಸಹ ಪರಜಾತ ಯೋಗಗ್ರಸ್ತರೆಂದು ಈ ನಾಡೀಗ್ರಂಥದಲ್ಲಿ ಸ್ಪಷ್ಟವಾಗಿದೆ. ಇದು ಈ ಮಾ-ಮಂಜರೀ ಪ್ರಕಾಶನಕ್ಕೆ ಮೊದಲು ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ. ಈಗ ಮಾ-ಮಂಜರಿ ನೋಡಿದಾಗ, ಈ ನಾಡೀಗ್ರಂಥಪ್ರತಿಪಾದ್ಯ ಪರಜಾತಯೋಗಸಂಪನ್ನರು ಈ ಮಾ-ಮಂಜರೀಕಾರಾದಿಗಳೆಂಬ ತತ್ವನಿಶ್ಚಯ ಯಾರಿಗೆ ಆಗುವುದಿಲ್ಲ?

ಮಧ್ವಾಚಾರ್ಯರ ವಿಷಯದಲ್ಲಿ ಗುರುದೃಷ್ಟಿಯ ಪ್ರಾಬಲ್ಯವನ್ನು ಹಾಗೂ ಅದರ ಪ್ರಭಾವವಾಗಿ ಬ್ರಾಹ್ಮಣೋತ್ತಮತ್ವ - ವಿಷ್ಣುಭಕ್ತ್ಯಾದಿದೇವತಾಲಕ್ಷಣಾದಿಗಳು ನಿರೂಪಿತವಾಗಿದೆ. ದುರಾಗ್ರಹಿ ಶಾಂಕರರಿಗೆ ಮಾ-ಮಂಜರೀ ಮುದ್ರಣಕ್ಕೆ ಮೊದಲೇ ಇದು ಗೊತ್ತಿಲ್ಲವಾದ್ದರಿಂದ ಈ ಮೊದಲ ಮುದ್ರಣದಲ್ಲಿ ಮಾ-ಮಂಜರಿಯು ನಾಡೀಗ್ರಂಥದ ಉದಾಹರಣೆ ಮಾಡದಿರುವುದೂ, ಹಾಗೂ ಮುಂದೆ ಮಾಡಬಹುದಾದ ಕಲ್ಪಿತನಾಡೀಗ್ರಂಥದ ಭವಿಷ್ಯವೂ ಸಹ ಈ ವೈಭವ ಗ್ರಂಥ

ಸ್ಫುಟಪಡಿಸಿದ್ದು ನಾಡೀಗ್ರಂಥಗ್ರಹಣಕ್ಕೆ ಅನುಗುಣವೇ ಆಗಿದೆ. ಹೀಗೆ ಶಾಂಕರರಿಗೂ-ಮಾಧ್ವ ರಿಗೂ ನಡೆವ ಈ ವಿವಾದದಲ್ಲಿ ನಾಡೀಗ್ರಂಥ ನಿರ್ಣಾಯಕವಾಗಿರುವುದುಚಮತ್ಕಾರವಾಗಿದೆ.

## ಅನುಪಪನ್ನಭಾಷಣದಿಂದ ಅಪ್ರಾಮಾಣಿಕತೆ

ನೋಡಲು ಪ್ರಮಾಣಪುಂಜದಿಂದ ತುಂಬಿದಂತೆ ಕಾಣುವ ಈ ಮಾ-ಮಂಜರಿಯು ತನ್ನ ಅನುಪಪನ್ನಭಾಷಿತ್ವದಿಂದ ಅಪ್ರಮಾಣವಾಗುವ ರೀತಿಯನ್ನು ಪ್ರತಿಪಾದಿಸುವುದು ಈ ವೈಭವಗ್ರಂಥದ ದೊಡ್ಡ ವೈಭವವಾಗಿದೆ. ಮಾ-ಮಂಜರಿಯಲ್ಲಿ:-

1. ''ಶಂಕರನೇ ಪರದೇವತೆ''ಯೆಂದು ದ್ವೈತಭಾವನೆಯನ್ನು ಆ ಶಂಕರನೇ ಅದ್ವೈತಾ ಚಾರ್ಯರೆಂದು ಅದ್ವೈತ ಭಾವನೆಯನ್ನು - ಎರಡನ್ನೂ ಹೇಳುವುದು ವ್ಯಾಹತವಾಗಿದೆ.

2. ಒಮ್ಮೆ ವ್ಯಾಸರನ್ನು ಶಿವಾಂಶರೆಂದು ಹೊಗಳಿ ಇನ್ನೊಂದು ಕಡೆ ಶಿವಾಂಶ ಶಂಕರಾ ಚಾರ್ಯರಿಂದ ವೇದವ್ಯಾಸರು ಸೋತರೆಂದು ನಿಂದಿಸುವುದು ಅನುಪಪನ್ನವಾಗಿದೆ.

3. ಒಮ್ಮೆ ಶಂಕರಾಚಾರ್ಯರು ಶಿವಾಂಶರೆಂದು ಸರ್ವಜ್ಞರೆಂದು ಹೇಳಿ, ಆಮೇಲೆ ಮಂಡನನ ಹೆಂಡತಿ ಕಾಮಕಲೆಯ ಪ್ರಶ್ನೆ ಕೇಳಿದಾಗ ಗೊತ್ತಾಗದೆ ಪರಕಾಯ ಪ್ರವೇಶ ಮಾಡಿ ಕಲಿಯಲು ಹೋದರೆಂಬ ಸಂಗತಿ ವ್ಯಾಹತವಾಗಿದೆ.

4. ಬ್ರಹ್ಮನ ಅವತಾರವೆಂದು ಒಪ್ಪಿತನಾದ ಮಂಡನನ ಹೆಂಡತಿ ಸರಸ್ವತಿಯೆಂದು ಹೇಳಿ, ಅವಳನ್ನು ಶಂಕರಾಚಾರ್ಯರು ಗೆದ್ದರೆಂದು ಹೇಳಿ, ಆಮೇಲೆ ಆ ಮಂಡನನ ಹೆಂಡತಿಯನ್ನು ಶೃಂಗೇರಿಯಲ್ಲಿ ಪ್ರತಿಷ್ಠಾಪಿಸಿ ಪೂಜಿಸಲು ಶಿಷ್ಯರಿಗೆ ಹೇಳುತ್ತಾ, ಗಂಡ ಮಂಡನನಿಗೆ ಪೂಜೆ ಪ್ರತಿಷ್ಠೆಗಳನ್ನು ಹೇಳದಿರುವುದು ಅನುಪಪನ್ನವಾಗಿದೆ.

5. ಶಿವನು ತನ್ನ ಪತ್ನಿ ಪಾರ್ವತಿಯೊಡನೆ ಸಾವಿರಾರು ವರುಷ ಅರ್ಧನಾರೀಶ್ವರನಾಗಿ ರತಿವಿಹಾರ ನಡೆಸಿರುವಾಗ, ಆಗ ಶಿವನಿಗೆ ತಿಳಿಯದಿದ್ದ ಕಾಮಕಲಾಪರಿಚಯ, ಈಗ ಶಂಕರಾಚಾರ್ಯನಾಗಿ ಬಂದು ಪರಕಾಯವನ್ನು ಪ್ರವೇಶಿಸಿ ಸತ್ತು ಹೋದ ರಾಜನ ವಿಧವೆಯರಾದ ಹೆಂಗಸರ ಸಂಭೋಗದಿಂದ ಪಡೆದ ಕಥೆ ಅನುಪಪನ್ನವಾಗಿದೆ.

6. ರಾಮಾಯಣ-ಭಾರತಾದಿಗಳ ಪರ್ಯಾಲೋಚನೆಯಿಂದ ರಾವಣ-ದುರ್ಯೋಧನ ಜರಾಸಂಧಾದಿಗಳ ವಿಚಾರದಿಂದ ದೃಢ ಹರಿದ್ವೇಷಾದಿಗಳು ಕಲ್ಯಾದಿ ದೈತ್ಯರ ಲಕ್ಷಣ ವೆಂದು ತಿಳಿಯುತ್ತದೆ. ದೃಢವಾಗಿ ಶ್ರೀಹರಿ ಭಕ್ತ್ಯಾದಿಗುಣಾಢ್ಯರಾದ ಶ್ರೀಮಧ್ವಾಚಾರ್ಯ ರನ್ನು ಕಲಿಯ ಭೃತ್ಯನಾದ ಕ್ರೋಧನೆಂದು ಹೇಳುವುದು ಅನುಪಪನ್ನವಷ್ಟೆ ಇದರಿಂದ ಕ್ರೋಧ-ಮಧು-ಮೂಕ ಇತ್ಯಾದಿ ವಿಚಾರಗಳು ಅನುಪಪನ್ನವಾಗುತ್ತವೆ.

7. ಕಾಮಭೃತ್ಯನಾದ ವಸಂತನೇ ಮಧುನಾಮಕನಾಗಿದ್ದು ತನ್ನ ಒಡೆಯ ಕಾಮನನ್ನು

ಕೊಂದದ್ದರಿಂದ ಶಿವದ್ವೇಷಿಯಾಗಿ ವೈಷ್ಣವಮತ ಸ್ಥಾಪಿಸಲು ಮಧ್ವಾಚಾರ್ಯ ಎಂದಾದನೆಂದು ಹೇಳಿದ್ದಕ್ಕೆ ವಸಂತನು ದೇವತೆಯಾದ್ದರಿಂದ ವಸಂತನೇ ಆದ-ಮಧುವೇ ಆದ - ಮಧ್ವಾಚಾರ್ಯರನ್ನು ದೈತ್ಯ ಎಂದು ಹೇಳುವುದು ಅಸಂಗತವಷ್ಟೆ

8. ದೇವತೆಗಳಿಗೆ ಜಾರಜಾತತ್ವಾದಿಗಳಿಲ್ಲವಾದ್ದರಿಂದ,ಹೀಗೆ ವಸಂತ ಎಂಬ ದೇವತೆಯಾದ ಪಕ್ಷದಲ್ಲಿ ಅಥವಾ ಪೂರ್ವೋಕ್ತರೀತಿಯಿಂದ ವಾಯುದೇವರೆಂದೇ ನಿರ್ಣೀತವಾದ್ದ ರಿಂದಲೂ, ಮಧ್ವಾಚಾರ್ಯರಿಗೆ ಮಧ್ವವಿಜಯ ಪ್ರತಿಪಾದ್ಯವಾದ ಸತ್ಕುಲಪ್ರಸೂತ ತ್ವಾದಿಗಳು ಸಿದ್ಧವಾಗುವುದರಿಂದ, ಮಧ್ವಾಚಾರ್ಯರ ತಂದೆಗಳನ್ನು 'ಮದ್ಯಗೇಹ' ಎಂದು ಹೇಳುತ್ತ ಕುಚೋದ್ಯ ಮಾಡುವುದು ಅನುಪಪನ್ನವಾಗುತ್ತದೆ. ಕೇರಳ ಭಾಷೆಯಲ್ಲಿ 'ಶ-ಸ' ಗಳ ಉಚ್ಚಾರಣೆ ಅತಿ ಸಮೀಪವಾದಂತೆ, ತುಳುನಾಡಿನಲ್ಲಿ ದ-ಧಗಳಲ್ಲಿ ಸಾಮ್ಯತೆ ಇರದೆ, ಸ್ಪಷ್ಟವಾಗಿ ವ್ಯತ್ಯಾಸವಾಗುವಂತೆ ಉಚ್ಚಾರವಿರುವುದರಿಂದ, ಶಂಕರ-ಸಂಕರ ಆದಂತೆ, ಮಧ್ಯಗೇಹ-ಮದ್ಯಗೇಹ ಆಗಲೆಂಬ ಆಕ್ಷೇಪ ಸರಿಯಾದುದಲ್ಲ.

9. ದೈತ್ಯಲಕ್ಷಣಾಢ್ಯರಿಗೆ ಕಂಸಾದಿಗಳಲ್ಲಿ ಕಂಡಂತೆ ಜಾರಜಾತತ್ವಾದಿಗಳು ಸರಿಯೆನಿಸುವುದ ರಿಂದ,ದೈತ್ಯಲಕ್ಷಣಾಢ್ಯರಾದ ಶಂಕರಾಚಾರ್ಯರಿಗೆ ಮಣಿಮಂಜರೀ ಕಥಿತವಾದ ಜಾರಜಾತತ್ವಾದಿಗಳು ಉಪಪನ್ನವಾಗುವಂತೆ, ದೇವಲಕ್ಷಣಾಢ್ಯರಾದ ಶ್ರೀಮಧ್ವಾ ಚಾರ್ಯರಿಗೆ ಮಾ-ಮಂಜರಿಯ ಆಕ್ಷೇಪ ಉಪಪನ್ನವಾಗುವುದಿಲ್ಲ.

10. ಭಿನ್ನಕಾಲದವರಾದ ಮಧ್ವಾಚಾರ್ಯರಿಗೂ ಪದ್ಮಪಾದುಕನಿಗೂ ಸಮಾಗಮವು ಕೃಷ್ಣ-ರಾವಣ ಸಮಾಗಮದಂತೆ ಹಾಸ್ಯಾಸ್ಪದವಾಗಿದೆ. ಶಂಕರಶಿಷ್ಯ ಪದ್ಮಪಾದುಕನಲ್ಲದೇ ಬೇರೆ ಪದ್ಮಪಾದುಕ ಮಧ್ವಾಚಾರ್ಯರ ಕಾಲದಲ್ಲಿದ್ದುದಕ್ಕೆ ಆಧಾರವಿಲ್ಲ.

ಹೀಗೆ ಈ ಮಾ-ಮಂಜರಿಯಲ್ಲಿ ಅನೇಕ ಅನುಪಪನ್ನ ಭಾಷಣವನ್ನು ಮನಗಂಡು ಈ ಗ್ರಂಥ ಅಪ್ರಾಮಾಣಿಕವೆಂದು ನಿರ್ಧರಿಸಬೇಕು.

## ಮಧ್ವಾಚಾರ್ಯರು ನೀಡುವ ಪ್ರಮಾಣ ಕಲ್ಪಿತವಲ್ಲ

ಮಧ್ವಾಚಾರ್ಯರು ಉದಾಹರಿಸಿದ ಶ್ರುತಿ-ಸ್ಮೃತಿಗಳು ಇಂದು ಸಿಗುತ್ತಿಲ್ಲವೆಂದು ಕಲ್ಪಿತವೆಂದು ಹೇಳುವ ಆಧುನಿಕವಾದ ಸರಿಯಾದುದಲ್ಲ. ದ್ವೈತ ಸ್ಥಾಪನೆಗೆ ಇಂದಿಗೂ ಪ್ರಸಿದ್ಧ ವಾದ ನೂರಾರು ಶ್ರುತಿಗಳು ಇರುವುದರಿಂದ, ಅದನ್ನೂ ಉದಾಹರಿಸಿದ ಶ್ರೀಮದಾಚಾರ್ಯರು ಇಂದು ಅಪ್ರಸಿದ್ಧವಾದ ಶ್ರುತಿಯನ್ನು ಮಾತ್ರ ಹಿಡಿದಿರುವುದಿಲ್ಲ. ಆದ್ದರಿಂದ ಅಪ್ರಸಿದ್ಧ ಶ್ರುತಿ ಉದಾಹರಣೆ ದೋಷವಲ್ಲ. ಪ್ರಸಿದ್ಧಶ್ರುತಿಯನ್ನೂ ಉದಾಹರಿಸಿ ಅಪ್ರಸಿದ್ಧವನ್ನೂ ಉದಾಹರಿಸು ವುದರಿಂದ ಆಚಾರ್ಯರ ವೇದಾಭಿಜ್ಞತೆಯ ಮಹಿಮೆ ವ್ಯಕ್ತವೇ ಆಗುತ್ತದೆ. ಶ್ರುತಿ ಅಪ್ರಸಿದ್ಧವಾದ ಮಾತ್ರಕ್ಕೆ ಕಲ್ಪಿತವೆಂದು ಅರ್ಥೈಸಲಾಗದು. ಶಾಂಕರ-ರಾಮಾನುಜಗ್ರಂಥಗಳಲ್ಲಿಯೂ ಕಾಣುವ

ಅಪ್ರಸಿದ್ಧ ಶ್ರುತಿಗಳನ್ನು ಕಲ್ಪಿತವೆಂದು ತೀರ್ಮಾನಿಸುವುದಿಲ್ಲವಷ್ಟೆ ಹಾಗೆಯೆ ಮಾಧ್ವ ಶ್ರುತಿಗಳ ಲ್ಲಿಯೂ ತಿಳಿಯುವುದೇ ಉಚಿತ. ಆದ್ದರಿಂದಲೇ ವಿದ್ಯಾರಣ್ಯಾದಿಗಳು ಆಚಾರ್ಯರ ವಾಕ್ಯಗಳನ್ನು ಕಲ್ಪಿತವೆಂದು ಹೇಳಿಲ್ಲ. ಇದನ್ನು ತಿಳಿಯದೇ ಅಪ್ಪಯ್ಯ ದೀಕ್ಷಿತಾದಿಗಳು ಆರಂಭಿಸಿದ ಈ ಕಲ್ಪಿತತ್ವ ವಾದಕ್ಕೆ ಈ ಮಾ-ಮಂಜರೀಕಾರ ಶರಣಾದುದು ವೈಚಾರಿಕತೆಯ ದಿವಾಳಿಗೆ ದ್ಯೋತಕವು.

ಇದರ ನಂತರ ವೈಷ್ಣವದೀಕ್ಷೆಗೆ ಮೂಲವಾದ ತಪ್ತಮುದ್ರಾಧಾರಣೆ - ಗೋಪೀ ಚಂದನ ಉರ್ಧ್ವಪುಂಡ್ರಧಾರಣೆ ಇವುಗಳ ಪ್ರಾಮಾಣಿಕತೆಯನ್ನು ನಿರೂಪಿಸಲಾಗಿದೆ. ಇಲ್ಲಿ ''ಪವಿತ್ರಂ ತೇ'' ಇತ್ಯಾದಿ ಶ್ರುತಿವಿಚಾರ ಚಕ್ರಮೀಮಾಂಸಾದಿ ಗ್ರಂಥಸಾರವಾಗಿದೆ. ಅನಂತರ ಮಣಿಮಂಜರಿಗೂ - ಮಾ-ಮಂಜರಿಗೂ ಇರುವ ಅಂತರವನ್ನು ನಿರೂಪಿಸಿ, ಮಧ್ವನಿಂದಾಪರವಾಗಿ ಪರವಾದಿಗಳು ಉದಾಹರಿಸಿದ ಪ್ರಮಾಣವಾಕ್ಯಗಳನ್ನು ಅನುಪಪನ್ನತೆಯಿಂದ ಅಪ್ರಾಮಾಣವಾಗಿ ಸಮರ್ಥಿಸುವ ವಿಚಾರ ಬಂದಿದೆ.

ವಿಧವೆಯಲ್ಲಿ ಜಾರಜಾತನಾದ ಮಧುವು, ಪದ್ಮಪಾದುಕರೂಪಿಯಾದ ಶಿವನ ಬಳಿ ಓದಲು ಬಂದು, ಓದಿದ ಮೇಲೆ ಗುರುಗಳಿಗೆ ವಿರುದ್ಧವಾಗಿ ಮಾತಾಡುವನಂತೆ. ಅದನ್ನು ತಿಳಿದು ಆ ಪದ್ಮಪಾದುಕನು ಅವನ ವರ್ಣಾದಿಗಳನ್ನು ಕೇಳಿ ಅವನ ಭ್ರಷ್ಟತೆಯನ್ನು ತಿಳಿಯುವನಂತೆ. ಈ ಕಥೆ ಹಿಂದೆ ಮುಂದೆ ವಿಚಾರಿಸದೆ ಪದ್ಮಪಾದುಕನು ಪಾಠ ಹೇಳುವ ದಡ್ಡನೆಂದು ನಿರೂಪಿಸುತ್ತದೆ. ಅವನನ್ನು ಈಶ್ವರನೆಂದು ಹೊಗಳಿದ್ದು ತೊಳೆದುಹೋಗುತ್ತದೆ.

ಈಶ್ವರನಾದವನಿಗೆ ಬಂದಿರುವ ಶಿಷ್ಯನ ಯೋಗ್ಯತೆ ಮೊದಲೇ ತಿಳಿದಿರಬೇಕಷ್ಟೆ ಈ ಈಶ್ವರತೆ ಇದ್ದುದರಿಂದಲೇ, ಓದಲು ಬಂದಾಗ ಪರತೀರ್ಥರು ಶಂಕರಾಚಾರ್ಯರನ್ನು ದುಷ್ಟನೆಂದು ತಿಳಿದು ಹೊರಹಾಕಿದ್ದರಷ್ಟೆ ಪದ್ಮಪಾದುಕನೂ ಹಾಗೆ ಮಾಡಬೇಕಿತ್ತಷ್ಟೆ

ಇದಲ್ಲದೆ, ಎಲ್ಲ ಅಧ್ಯಯನ ಆದ ಮೇಲೆ, ಪದ್ಮಪಾದುಕನು ಮಧುವನ್ನು ದೈತ್ಯನೆಂದು ತಿಳಿದನೆಂಬುದು ಹೇಗೆ? ಮಧುದೈತ್ಯನೇ ತನ್ನ ಜಾರಜತ್ವಾದಿಗಳನ್ನು ತಿಳಿಸಿದನೆಂಬುದು ಹಾಸ್ಯಾಸ್ಪದ. ತನಗೆ ಶಾಪ ಆಪಾದಕವಾದ ಈ ಕೆಲಸವನ್ನು ಯಾರೂ ಮಾಡಲಾರರು. ಅದರಲ್ಲಿಯೂ ವಂಚಕರಾದವರು ಹೆಚ್ಚು ಜಾಗರೂಕರಾಗಿರುತ್ತಾರಷ್ಟೆ ಆದ್ದರಿಂದ ಮಧುವೇ ತಾನೇ ತನ್ನ ನೀಚತ್ವವನ್ನು ಪದ್ಮಪಾದುಕನಿಗೆ ಹೇಳಿದನೆಂಬ ಕಥೆ ಅನುಪಪನ್ನ ಭಾಷಣವು. ಹೀಗೆ ಮಾ-ಮಂಜರಿಯಲ್ಲಿ ಹೇಳಿದ ಕಥೆಗಳೆಲ್ಲ ಅಪ್ರಮಾಣವಾಗಿವೆ. ನಿತ್ಯನಿರ್ದುಷ್ಟನಾದ ಶ್ರೀನಾರಯಣನ ಅವತಾರನಾದ ಪರಶುರಾಮನಿಗೆ ಕ್ರೋಧಾದಿ ದೋಷವನ್ನು ಹೇಳುವುದು, ಸ್ವತಃ ದೈತ್ಯನೇ ಆದ ಆ ಕ್ರೋಧನು, ರಾಕ್ಷಸನಾಗಬೇಕೆಂಬ ಶಾಪಗ್ರಸ್ತನಾಗುವುದು ಇತ್ಯಾದಿಗಳು ಅಲ್ಲಿ ಅನುಪಪನ್ನಭಾಷಣಗಳಾಗಿವೆ.

ಹೀಗೆ ಮಾ-ಮಂಜರಿಯಲ್ಲಿ ಅನುಪಪನ್ನತೆಯನ್ನು ತೋರಿಸಿ, ಈ ದೋಷ ಸಾತ್ವಿಕ ಪುರಾಣಾವಲಂಬಿಗಳಾದ ಮಾಧ್ವರಿಗೆ ಬರಲಾರದೆಂದು ನಿರೂಪಣೆಯಿದೆ. ಈ ಸಂದರ್ಭದಲ್ಲಿ

ಸಾತ್ವಿಕ - ರಾಜಸ - ತಾಮಸ ಈ ಪುರಾಣವಿಶ್ಲೇಷಣೆ, ಅದಕ್ಕೆ ಸಾಧಕಗಳು, ಇತ್ಯಾದಿವಿಷಯವು ಹೃದಯಂಗಮವಾಗಿ ವಿಸ್ತಾರವಾಗಿ ವಿಶ್ಲೇಷಣೆ ಪಡೆದಿದೆ. ಹೀಗೆ ಮಾ-ಮಂಜರಿಯ ಪ್ರಥಮ ಸರ್ಗದ ವಿಮರ್ಶೆಯನ್ನು ಈ ವೈಭವಗ್ರಂಥದಲ್ಲಿ ಕಾಣುವಾಗ ಕೊನೆಯಲ್ಲಿ ಜೀವೈಕ್ಯವಾದದಲ್ಲಿ ಜೀವತ್ಮೈವಿಧ್ಯವಾದಕ್ಕೊಪ್ಪುವ ದೇವ-ದೈತ್ಯ ವಿಚಾರವೆಲ್ಲ ಏಕೆಂದು ಪ್ರಶ್ನಿಸುವ ಮಾಧ್ವಸ್ತುತಿಯ ಪ್ರಶ್ನಾತ್ಮಕ ನುಡಿಯು ಅತ್ಯಂತ ಸಂಗತವಾಗಿದೆ.

## ದ್ವಿತೀಯಸರ್ಗ ವಿಮರ್ಶೆ

ಇಲ್ಲಿಯೂ ಅನುಪಪನ್ನಭಾಷಣವೇ ಮಾ-ಮಂಜರಿಯ ಪ್ರಧಾನದೋಷವಾಗಿದೆ. ವೇದೋದ್ಧಾರಕರೆಂದು ಶಂಕರಾಚಾರ್ಯರನ್ನು ಹೊಗಳುವುದು, ಕುಮಾರಭಟ್ಟನ ಕೀರ್ತಿಯ ಚೌರ್ಯವೆಂದಾಗುವುದಾಗಿ ನಿರೂಪಿಸಿರುವುದು ಸರಿಯಾಗಿದೆ. ಬೌದ್ಧಮತವನ್ನು ನಿರಾಸ ಮಾಡಿದ ಕೀರ್ತಿಯು, ಬೌದ್ಧಮತವೆಂದು ಆಗಲೇ ಎಲ್ಲರಿಂದಲೂ ಮೂದಲಿಸಲ್ಪಟ್ಟ ಅದ್ವೈತ ಮತದ ಶಂಕರಾಚಾರ್ಯರಿಗೆ ಹೇಗೆ ಬಂದೀತು? ಕುಮಾರಭಟ್ಟ - ಭಾಸ್ಕರ - ಪಾರ್ಥಸಾರಥಿಮಿಶ್ರ - ವಿಜ್ಞಾನ ಭಿಕ್ಷು - ಇತ್ಯಾದಿಗಳೆಲ್ಲ ಶಂಕರಮತವನ್ನು ಬೌದ್ಧವೆಂದೇ ಪರಿಗಣಿಸಿದ್ದರಷ್ಟೆ ಇದರ ನಂತರ, ಶಂಕರ ಚರಿತೆಯಲ್ಲಿ ಮೊದಲು ಬರುವ ಉತ್ಪತ್ತಿ ವಿಷಯದಲ್ಲಿ ವ್ಯಭಿಚಾರ ಜನನದೋಷವು ಸಮರ್ಥಿತವಾಗಿದೆ. ಕಲಿಯುಗದಲ್ಲಿ ಅವತರಿಸದಿರುವುದರಿಂದ ತ್ರಿಯುಗಹೂತಿಯೆನಿಸಿದ ವಿಷ್ಣುವೇ ಪದ್ಮಪಾದನೆಂಬ ವಾದಕ್ಕೆ ಸತ್ವವಿಲ್ಲ, ಎಂದೆಂದಿಗೂ ಅವತರಿಸದಿರುವ, ಆದ್ದರಿಂದಲೇ ಕೃತ-ತ್ರೇತಾ-ದ್ವಾಪರಗಳಲ್ಲಿ ಅವತರಿಸದಿರುವ ಬ್ರಹ್ಮ-ಸರಸ್ವತಿ ಯರನ್ನು ದೂರ್ವಾಸಶಾಪದಿಂದ ಈ ಕಲಿಗಾಲದಲ್ಲಿ ಮಂಡನ-ಶಾರದಾರೂಪವಾಗಿ ಕಲ್ಪಿಸುವುದು ಅಸಂಗತವಾಗುತ್ತದೆ. ಯತಿಯಾಗಿ ಕಾಮಕಲಾಪರಿಚಯಕ್ಕಾಗಿ ಪ್ರವೃತ್ತನಾದುದು, ಅದನ್ನು ಪ್ರಶ್ನಿಸುವ ಪದ್ಮಪಾದನ ಬಾಯಿ ಮುಚ್ಚಿಸುವುದೆಲ್ಲ ಶಂಕರ ಚರಿತೆಗೆ ಕಳಂಕಗಳು. ಶಾರದಾ-ಮಂಡನರಲ್ಲಿ ಒಬ್ಬರಿಗೆ ಮುಂಡನ ಮಾಡಿಸಿ ದೂರ ಕಳಿಸಿ ಶಾರದೆಯನ್ನು ಮಠದಲ್ಲಿ ಪ್ರತಿಷ್ಠಾಪಿಸುವ ಸಂಗತಿ ಹೇಸಿಗೆಯ ವಿಷಯವಾಗಿದೆ. ಸರ್ವಸಮರ್ಥರುದ್ರಾಂಶನೆಂದು ಒಪ್ಪಿತರಾದ ಶಂಕರಾಚಾರ್ಯರಿಗೆ ಆಯುಷ್ಯಕ್ಷೀಣವಾಯಿತೆಂಬುದು, ಆಗ ರುದ್ರನೇ ಪುನಃ ಎಂಟು ವರ್ಷ ಆಯುಷ್ಯ ನೀಡಿದನೆಂಬುದು ಅನುಪಪನ್ನವಾಗಿದೆ. ಇದರಂತೆ ವಾದದಲ್ಲಿ ಸೂತ್ರಕಾರರನ್ನು ಶಂಕರರು ಸೋಲಿಸಿದರೆಂದು ವರ್ಣಿಸಿ ಶಾಂಕರಗ್ರಂಥಗಳಿಗೆ ಸೂತ್ರಾನಭಿಪ್ರೇತ ಅರ್ಥವಿರುವುದನ್ನು ಒಪ್ಪಿ ಆ ಸೂತಭಾಷ್ಯತ್ವವನ್ನು ಹೇಳುವುದು ಅಸಂಗತವಾಗಿದೆ. ತನಗೆ ಸಮ್ಮತವಲ್ಲದ ಅರ್ಥವನ್ನು ಪ್ರಚಾರಮಾಡುವ ಸೂತ್ರಭಾಷ್ಯ ಬರೆದ ಶಂಕರರಿಗೆ ಸೂತ್ರಕಾರ ವೇದವ್ಯಾಸರು 16 ವರ್ಷ ಆಯುಷ್ಯ ನೀಡುವುದೂ ಅನುಪಪನ್ನವಾಗಿದೆ. ಸ್ವತಃ ಪರಮೇಶ್ವರನ ಅಂಶರಾದ ಶಂಕರರಿಗೆ ಕಾರಣವಿಲ್ಲದೇ ಆಯುಷ್ಯ ಕುಗ್ಗಿದ ಸಂಗತಿ ಅಸಂಗತವಾಗಿದೆ. ತನ್ನ ಮೃತ ತಾಯಿಯ ಶರೀರ ಸುಡುವುದು ಶಂಕರರ ಯತಿಧರ್ಮಭಂಜಕವಾಗಿದೆ. ಆ ಊರಿನ ಜನರಾರೂ

ಆಗ ಶಂಕರರಿಗೆ ಸಹಕಾರ ನೀಡದಿರುವುದರಿಂದ, ಆ ಶಂಕರಮಾತೆ ವ್ಯಭಿಚಾರಿಣಿಯೆಂದು ಕಳಂಕಿತಳಾದುದನ್ನು ಒಪ್ಪಿ ಹಿಂದೆ ಶಿವಗುರು-ವಿಮಲಾ ಸುಪುತ್ರರೆಂದು ಸುಸಂಸ್ಕೃತರೆಂದೂ ಶಂಕರರನ್ನು ಬಣ್ಣಿಸಿದ್ದು ಅಸಂಗತವಾಗಿದೆ. ಶಾಂಕರ ಸಿದ್ಧಾಂತಕ್ಕೂ ಬೌದ್ಧಮತಕ್ಕೂ ಏನು ವ್ಯತ್ಯಾಸವೆಂಬ ಜಿಜ್ಞಾಸೆ ಆ ಕಾಲದಲ್ಲೇ ಇರುವಂತೆ, ಶಿವ-ನಾರಾಯಣನಾರದಾದಿಗಳ ವಾಕ್ಯಗಳಲ್ಲಿ ಈ ಜಿಜ್ಞಾಸೆ ಇಲ್ಲವಾದ್ದರಿಂದ, ಶಿವ-ನಾರಾಯಣ-ನಾರದರ ಪರಂಪರೆಯೇ ಈ ಗೌಡಪಾದ-ಗೋವಿಂದ-ಶಂಕರರ ಪರಂಪರೆಯಾಗುವುದು ಅಸಂಗತವಷ್ಟೆ ಶಾಂಕರ ಪ್ರಕ್ರಿಯೆಗಳೆಲ್ಲ ಬೌದ್ಧಮತವೆಂದೇ ನಿರ್ಧಾರಿತವಾಗಿರುವಾಗ ಇದು ಇನ್ನೂ ಅಸಂಗತವಷ್ಟೆ ಕಾಶ್ಮೀರದ ಸರ್ವಜ್ಞ ಪೀಠಾರೋಹಣ ಕಥೆಯಲ್ಲಿ ಕಾಮಕಲಾಕಾಮಿಗಳಾದ ಶಂಕರರ ಪರಿಶುದ್ಧತೆಯ ಬಗ್ಗೆ ಸರಸ್ವತಿಯು ಪ್ರಶ್ನಿಸಿದಂತೆ, ಅದಕ್ಕೆ ಶಂಕರರು ಉತ್ತರಿಸಿದ ಸಂಗತಿಯು, ಹಿಂದೆ ಸರಸ್ವತೀ ಅವತಾರಳೆಂದು ಒಪ್ಪಿತಳಾದ ಮಂಡನಪತ್ನಿ ಶಾರದೆಯನ್ನು ಸೋಲಿಸುವ ಕಥಾಭಾಗದಲ್ಲೇ ಆ ಸರಸ್ವತಿಯ ರೂಪಕ್ಕೆ ಈ ಪ್ರಶ್ನೆ ತೋಚದಿದ್ದುದಕ್ಕೆ ಕಾರಣವಾಗುವುದರಿಂದ ಅಸಂಗತವಾಗಿದೆ. ಕಲ್ಹಣಾದಿ ಕೃತ ಕಾಶ್ಮೀರ ಸಂಬಂಧಿಗ್ರಂಥಗಳಲ್ಲಿ ಸರ್ವಜ್ಞ ಪೀಠದ ಪ್ರಸಕ್ತಿಯೇ ಇಲ್ಲವಾದ್ದರಿಂದ ಈ ಕಥೆಗಳೆಲ್ಲ ನಿರಾಧಾರವಾಗಿವೆ. ಪ್ರಾಚೀನ ಶಂಕರವಿಜಯಗಳಲ್ಲಿ ಸಾಂಕ್ರಾಮಿಕ ಭಗಂಧರ ರೋಗಕ್ಕೆ ತುತ್ತಾಗಿ, ರಾಜ್ಯದ ಹೊರಗೆ ಗುಹೆಯಲ್ಲಿರುವಂತೆ ರಾಜಶಾಸಿತರಾಗಿ ಮರಣವೇದನೆಯಿಂದ ಶರೀರಬಿಟ್ಟ ವಿಚಾರಕ್ಕೆ ವಿರುದ್ಧವಾದ ಈ ಆಧುನಿಕ ಮಾ-ಮಂಜರಿಯು ವರ್ಣಿಸಿದ ಶಂಕರರ ಮರಣಕಥೆ ಅಪ್ರಾಮಾಣಿಕವೇ ಆಗಿದೆ. ಶಂಕರರನ್ನು ಹನುಮಂತ ಹೊತ್ತು ಮೇರುಪರ್ವತಕ್ಕೆ ಪ್ರದಕ್ಷಿಣೆ ಹಾಕಿದ ವಿಚಾರ, ಅದ್ವೈತದ ನಿರ್ಗುಣಬ್ರಹ್ಮೈಕ್ಯ ಪಡೆದ ಶಂಕರರಿಗೆ ಅನನುಗುಣವೆಂದು ಸ್ಪಷ್ಟವಾಗಿದೆ.

ಹೀಗೆ ಶಂಕರಚರಿತೆಯ ವೈಭವೀಕರಣಕ್ಕೆ ಹೊರಟ ಈ ಮಾ-ಮಂಜರಿಯ ದ್ವಿತೀಯಸರ್ಗದ ವಿಮರ್ಶೆ ಈ ವೈಭವಗ್ರಂಥದಲ್ಲಿ ಬಂದಿರುತ್ತದೆ.

## ತೃತೀಯ ಸರ್ಗ ವಿಮರ್ಶೆ

ಮಧ್ವಾಚಾರ್ಯರ ನಿಂದೆಗಾಗಿಯೇ ಹೊರಟ ಈ ಸರ್ಗದಲ್ಲಿ ಪ್ರಾಮಾಣಿಕತೆ ಎಳ್ಳಷ್ಟು ಇಲ್ಲವೆಂಬುದು, ಮಧ್ವವಿಜಯಾದಿಗಳನ್ನು ಐತಿಹಾಸಿಕವಾಗಿ ಕಂಡವರಿಗೆ, ಹಾಗೂ ಹಿಂದೆ ಹೇಳಿದಂತೆ ಮಧ್ವಾಚಾರ್ಯರ ದೇವಾಂಶತ್ವ - ವಾಯುಅವತಾರತ್ವಗಳನ್ನು ತಿಳಿದವರಿಗೆ ಪ್ರತ್ಯೇಕ ಹೇಳಬೇಕಾಗಿಲ್ಲ. ಹೀಗೆ ಹೊರನೋಟದಿಂದಲೇ ಅಪ್ರಾಮಾಣಿಕವಾದ ಈ ಗ್ರಂಥ ಒಳಗೆ ನೋಡಿದಾಗ ಅಪ್ರಾಮಾಣಿಕವೆಂದು ಮತ್ತೂ ಸ್ಫುಟವಾಗುವ ವಿಚಾರ ಇಲ್ಲಿ ಪ್ರಸ್ತುತವಾಗುತ್ತಿದೆ.

ಶಂಕರಾಚಾರ್ಯರು ಅದ್ವೈತಸ್ಥಾಪಿಸಿದ ಮೇಲೆ ಮಧ್ವಾಚಾರ್ಯರಿಂದ ಆ ಅದ್ವೈತ ಶಿಥಿಲವಾದಾಗ ಪುನಃ ಆ ಶಂಕರರೇ ವಿದ್ಯಾರಣ್ಯರಾಗಿ ಬಂದು ಅದ್ವೈತ ಉಳಿಸಿದರೆಂದು ಹೇಳಲು ಈ ಮಾ-ಮಂಜರಿಯ 3-4 ಸರ್ಗಗಳು ಹೊರಟಿವೆಯಷ್ಟೆ. ಆದರೆ, ಶಂಕರಾಚಾರ್ಯರ ಶಿಷ್ಯ

ಪದ್ಮಪಾದನಿಗೆ ಅದ್ವೈತಸಾಕ್ಷಾತ್ಕಾರವಾಗಿ ಕೈವಲ್ಯ ಪ್ರಾಪ್ತಿಯಾಗಿದೆಯೆಂದು ಒಪ್ಪಿದ ಮೇಲೆ ಗುರು ಶಂಕರರಿಗೂ ಆ ಮೋಕ್ಷ ಆಗಲೇ ಬೇಕಷ್ಟೆ ಈ ನಿರ್ಗುಣಬ್ರಹ್ಮೈಕ್ಯ ಪಡೆದ ಶಂಕರರು ಮತ್ತೆ ಭೂಮಿಯಲ್ಲಿ ವಿದ್ಯಾರಣ್ಯರಾಗಿ ಬರುವುದು ಅಸಂಗತವಷ್ಟೆ ಶಿಷ್ಯನಿಗೆ ಮೋಕ್ಷವಾದರೂ ಗುರುಗಳಿಗೆ ಆಗಲಿಲ್ಲವೆಂದರೆ ಇದು ನಗೆಪಾಟಲಾಗದೀತೆ?

ಇದಲ್ಲದೆ, ವಿದ್ಯಾರಣ್ಯರು ಮಾಧ್ವಗ್ರಂಥವನ್ನು ಖಂಡಿಸುವ ಯಾವ ಗ್ರಂಥವನ್ನೂ ರಚಿಸಲಾಗದಿರುವಾಗ, ವಾಯುದೇವರು ಅದ್ವೈತಮತ ಖಂಡಿಸಲು ಅವತರಿಸಿದಂತೆ, ಮಧ್ವಮತಖಂಡನೆಗಾಗಿ ಶಂಕರರೇ ವಿದ್ಯಾರಣ್ಯರಾಗಿ ಮತ್ತೆ ಹುಟ್ಟಿದರೆಂಬ ವಿಚಾರ ಅಸಂಗತ ವಷ್ಟೆ ಮಧ್ವಾಚಾರ್ಯರು ಅದ್ವೈತಖಂಡನೆಗಾಗಿಯೇ ಉಪಾಧಿಖಂಡನ-ಮಾಯಾವಾದ ಖಂಡನ-ಮಿಥ್ಯಾತ್ವಾನುಮಾನಖಂಡನ-ತತ್ತ್ವೋದ್ಯೋತ ಇತ್ಯಾದಿ ಸ್ವತಂತ್ರ ಕೃತಿ ವಿರಚಿಸಿದಂತೆ ಭಾಷ್ಯ - ಅನುಭಾಷ್ಯ - ತತ್ವನಿರ್ಣಯಾದಿಗಳಲ್ಲಿ ಅದ್ವೈತವನ್ನೇ ವಿಶೇಷವಾಗಿ ಖಂಡಿಸಿದಂತೆ ವಿದ್ಯಾರಣ್ಯರ ಒಂದೂ ಕೃತಿಯು ಮಧ್ವಮತದ ಖಂಡನೆಗಾಗಿ ಇರುವುದಿಲ್ಲ. ವಸ್ತುತಃ ವಿದ್ಯಾ ರಣ್ಯರು ಅದ್ವೈತಕ್ಕೆ ವಿಶೇಷವಾಗಿ ಯಾವ ಕೊಡುಗೆಯನ್ನೂ ನೀಡಿರುವುದಿಲ್ಲ. ಪರಮತಗಳ ಗ್ರಂಥವನ್ನೇ ಹೆಚ್ಚು ವ್ಯಾಖ್ಯಾನಿಸುವರಾಗಿದ್ದಾರೆ. ಇದು ಶಾಂಕರಮತದೌರ್ಬಲ್ಯ ಚೆನ್ನಾಗಿ ಅರ್ಥ ವಾಗಿದ್ದರಿಂದ ಆಗಿರಬೇಕೆಂಬ ರೀತಿಯಲ್ಲಿ ಮಾಧ್ವಸ್ತುತಿಯಲ್ಲಿ ಬಂದ ವಿದ್ಯಾರಣ್ಯಚಿತ್ರಣ ಅರ್ಥ ಪೂರ್ಣವೆನಿಸುತ್ತದೆ. ಆದ್ದರಿಂದ 3-4ಸರ್ಗಗಳ ಮಾ-ಮಂಜರಿಯ ಪ್ರವೃತ್ತಿ ಅನುಪಪನ್ನವಾಗಿದೆ.

ವಿಶ್ವಮಿಥ್ಯಾತ್ವ ಹೇಳುವ ಅದ್ವೈತ ಮತದಲ್ಲಿ ಅದ್ವೈತವು ಮಾತ್ರ ಪಾರಮಾರ್ಥಿಕ ಸತ್ಯವಾಗಿರುವಾಗ, ಪಾರಮಾರ್ಥಿಕವಾಗಿ ಸತ್ಯವಲ್ಲದ ಶಂಕರ ದೇವಾಂಶತ್ವ-ಮಧ್ವದೈತ್ಯಾಂಶ ತ್ವಾದಿಗಳನ್ನು ಮಾ-ಮಂಜರೀಕಾರ ಹೇಳುವುದು ಅನುಚಿತವೆಂದು, ವಿಶ್ವಸತ್ಯತ್ವವಾದಿಗಳಾದ ಮಾಧ್ವರು ಮಾತ್ರ ಶಂಕರ ದೈತ್ಯಾಂಶತ್ವ - ಮಾಧ್ವದೇವಾಂಶತ್ವಗಳ ವಿಚಾರ ಮಾಡುವುದು ಉಚಿತವೆಂದು ನಿರೂಪಿಸುವುದು ಎಲ್ಲರೂ ಒಪ್ಪುವಂತಿದೆ.

ಮಧ್ವಚರಿತೆಯ ವಿಕೃತಚಿತ್ರಣಕ್ಕಾಗಿ, ಮಧ್ವಾಚಾರ್ಯರ ಅವತಾರಕ್ಕೆ ಕಾರಣರಾದ ಶ್ರೀ ಮಧ್ಯಗೇಹ ಭಟ್ಟರನ್ನು 'ಮದ್ಯಗೇಹ' ಇತ್ಯಾದಿಯಾಗಿ ಮಾ-ಮಂಜರಿ ಕಲ್ಪಿತ ವಿಷಯವಲ್ಲ ಅಪೇಯ(ಮದ್ಯ)ದೀಕ್ಷಿತ ಶಿಷ್ಯರಿಗೆ ಉಚಿತವಾದ ಮಾತಾಗಿದೆಯಷ್ಟೆ ತುಳುಭಾಷೆಯ "ನಡಿಲ್ಲಾಯ" ಎಂಬುದನ್ನು "ಮದ್ಯಗೇಹ" ಎಂದು ಪರಿವರ್ತಿಸುವ ಕ್ರಮ ತಿಳಿಯದೊ, ಮಾ-ಮಂ. ಮಾಡುವ ಕುಚೋದ್ಯಗಳೆಲ್ಲ ದ್ವೇಷಾಸೂಯ ಆವಿಷ್ಕಾರಮಾತ್ರವು.

ಶಂಕರರಂತೆ ಮಧ್ವರನ್ನೂ ವಿಧವಾಜಾತ ಗೋಲಕನೆಂದು ಹೇಳ ಹೊರಟ ಈ ಮಾ-ಮಂಜರಿಯು, ಮುಂದೆ ಶಂಕರರಿಗಾದಂತೆ ಮಧ್ವರಿಗೆ ದ್ವಿಜಸಂಸ್ಕಾರಾದಿಗಳ ಹೀನತೆಯನ್ನು ಬಹಿಷ್ಕಾರವನ್ನೂ ಹೇಳದೆ "ಕೃತೋಪನೀತಃ" ಇತ್ಯಾದಿ ವಿಧವಾಗಿ ಸಕಲದ್ವಿಜರ ಕರುಣೆಯಿಂದ ಉಪನಯನಾದಿಸಂಸ್ಕಾರವಾಯಿತೆಂದು ಹೇಳಿದ್ದು ಅಪಹಾಸ್ಯ ವಿಷಯವಾಗಿದೆ. ಮುಂದಿನ

ಮುದ್ರಣದ ಆವೃತ್ತಿಯಲ್ಲಿ ಈ ತಪ್ಪು ತಿದ್ದಿಕೊಳ್ಳುವಂತೆ ಮಾಧ್ವದ್ವೇಷಿಗಳೆಲ್ಲ ಈ ಮಾ-ಮಂಜರೀ ಕಾರನಿಗೆ ಆಶೀರ್ವಾದ ಮಾಡಬೇಕಾಗಿದೆಯಷ್ಟೆ ದ್ವೇಷಾಸೂಯ ತುಂಬಿ ಮಾತಾಡುವಾಗ ಈ ತರಹ ತಪ್ಪುಗಳು ಸಹಜವೆಂದು ತಿಳಿದು ಮಧ್ವಭಕ್ತರೂ ಈ ಮಾ-ಮಂಜರೀಕಾರನಿಗೆ ಅನುಕಂಪ ತೋರಿಸಬೇಕಾಗಿದೆ! ಮಧ್ವಾಚಾರ್ಯರಿಗೆ ತಂದೆ-ತಾಯಿಗಳಿಟ್ಟ ಹೆಸರು 'ವಾಸುದೇವ' ಎಂದು. ಅವರಿಗೆ ಮಧ್ವ ಎಂಬ ಹೆಸರು ವೇದಮಾತ್ರ ಸಿದ್ಧವಾದುದು. ಆದ್ದರಿಂದ ತಂದೆ-ತಾಯಿಗಳು ಮಧು ಎಂದು ನಾಮಕರಣಮಾಡಿದರೆಂದು ಕಲ್ಪಿಸಿ ಮಾ-ಮಂಜರಿಯು ಮಾಡುವ ಕುಚೋದ್ಯಕ್ಕೆ ಬೆಲೆಯಿಲ್ಲ. ಶಂಕರಾಚಾರ್ಯರ ಪರಂಪರೆಯ ಪದ್ಮಪಾದುಕನು ಈ ಮಧ್ವರನ್ನು ವಿಚಾರವಿಲ್ಲದೆ ಶಿಷ್ಯನನ್ನಾಗಿ ಸ್ವೀಕರಿಸಿ ಆಮೇಲೆ ಈ ಶಿಷ್ಯನ ದೈತ್ಯತನ ನೋಡಿ ಶಾಪಿಸುವ ಕಥೆ ಆ ಗುರುವಿನ ಮೂರ್ಖತೆಗೆ ಸಮರ್ಥನೆಯಾಗಿದೆ. ವಿಚಾರಮಾಡದೆ ಅಯೋಗ್ಯರನ್ನು ಶಿಷ್ಯನನ್ನಾಗಿ ಯಾರೂ ಸ್ವೀಕರಿಸಲಾರರಷ್ಟೆ ಕಾಲಡಿ ಶಬ್ದವನ್ನು 'ಪದತಲ' ಎಂದು ಪಂಡಿತಾಚಾರ್ಯರು ಸಂಸ್ಕೃತ ಭಾಷೆಗೆ ಪರಿವರ್ತಿಸಿದ್ದು ಈ ಮಾ-ಮಂಜರೀಕಾರನಿಗೆ ಹೊಟ್ಟೆಯುರಿಸುವಂತಾಗಿ, 'ಉಡುಪಿ' ಎಂಬುದನ್ನು ಆಂಧ್ರಭಾಷಾನುಸಾರ 'ರೂಕ್ಷವಿಟ್' ಎಂದು ಪರಿವರ್ತಿಸಿ ಪ್ರತೀಕಾರದ ದೈತ್ಯಸ್ವಭಾವ ತೋರುವ ಮಾತೊಂದು ಇಲ್ಲಿದೆ.

> ಕಾಲಟೀ ಕಾಲಡೀ ಕೃತ್ವಾ ಪತ್ತಲಂ ಮಣಿಮಂಜರೌ ।
> ಯೋಽಬುಕ್ಕತ್ವದಯುಗ್ಮೇನ ತುಷ್ಯೇತ್ ಸ ನ ಕಥಂ ನರಃ ॥

(ಕಾಲಟಿಯನ್ನು ಕಾಲಡಿಯನ್ನಾಗಿ ಮಾಡಿ ಮಣಿಮಂಜರಿಯಲ್ಲಿ 'ಪದತಲ' ಎಂದು ಯಾರು ಒದರಿದನೋ, ಅವನು (ಪಂಡಿತಾಚಾರ್ಯ) ಈ ಎರಡು ಪದಗಳಿಂದ (ಮಧ್ಯಗೇಹ-ರೂಕ್ಷವಿಟ್) ಹೇಗೆ ಖುಷಿಗೊಳ್ಳಲಾರ?)

ಇದನ್ನು ಸ್ವಲ್ಪ ವಿಮರ್ಶಿಸೋಣ. ಕೇರಳ ಪ್ರಾಂತ್ಯದ ಕಾಲಡಿಯ ಭಾಷೆಯಾದ ಮಲೆಯಾಳದಲ್ಲಿ ಕಾಲಡಿ ಎಂದರೆ ಕಾಲಿನ ಅಡಿ ಎಂದೇ ಅರ್ಥವಿರುವುದರಿಂದ ಪಂಡಿತಾಚಾರ್ಯರ ತರ್ಜುಮೆ ಸರಿಯಾಗಿದೆ. ಆದರೆ ಉಡುಪಿ ಪ್ರಾಂತದ ತುಳುಭಾಷೆಗೆ ಹೊಂದದಂತೆ ಆಂಧ್ರಭಾಷೆಯ ಅರ್ಥದಿಂದ ಮಾ-ಮಂಜರೀಕಾರ ತರ್ಜುಮೆ ಮಾಡುವುದು ಹೇಗೆ ಖುಷಿಗೊಳಿಸೀತು? ವಸ್ತುತಃ ಪಂಡಿತಾಚಾರ್ಯರು ಇದೊಂದಕ್ಕೆ ಮಾತ್ರ ತರ್ಜುಮೆ ಮಾಡಿದವರಲ್ಲ. ಮಧ್ಯಗೇಹ = ನಡಿಲ್ಲಾಯ । ಪೂರ್ವಾಲಯ = ಮೂಡಿಲ್ಲಾಯ । ಪೂಗವನಾನ್ವಯಜ = ತೊಟಂತಿಲ್ಲಾಯ । ಹೀಗೆ ಅನೇಕ ಪ್ರಾಕೃತ ಹೆಸರನ್ನು ಆ ಪ್ರಾಕೃತ ಭಾಷೆಯ ಅರ್ಥಕ್ಕೆ ತಕ್ಕಂತೆ ಸಂಸ್ಕೃತಕ್ಕೆ ತರ್ಜುಮೆ ಮಾಡಿರುತ್ತಾರೆ. ಇದು 'ಕಾಲಡಿ' ಗೂ ಸಮವಾದಾಗ ಸಿಟ್ಟೇಕೆ? ಕಾಲಟಿಯನ್ನು ಕಾಲಡಿಯಾಗಿ ಮಾಡಿದರೆಂಬುದೂ ತಪ್ಪು. ಇಂದಿಗೂ ಆ ಹಳ್ಳಿ ಕಾಲಡಿ ಎಂಬ ವ್ಯವಹಾರ ಪಡೆದಿರುವುದು ಸ್ಮಾರ್ತ ಗ್ರಂಥಗಳಲ್ಲೇ ಕಂಡಿರುತ್ತದೆ. 'ಕಾಲಟಿ' ಎಂಬುದಕ್ಕೂ ಕೂಡ ''ಪದತಲ'' ಎಂದೇ ಅರ್ಥವಿರುತ್ತದೆ.

## ಕಾಲಡಿ ವರ್ಣಬಾಹ್ಯರ ನೆಲೆ !

ಮುಖ - ಬಾಹು - ಊರು - ಪಾದಗಳಿಂದ ಬ್ರಾಹ್ಮಣ - ಕ್ಷತ್ರಿಯ - ವೈಶ್ಯ - ಶೂದ್ರರು ಜನಿಸುವರೆಂಬುದು ಪುರುಷಸೂಕ್ತದಿಂದ ತಿಳಿಯುವುದಷ್ಟೆ ಈಗ ಕಾಲಡಿಯಲ್ಲಿ ಹುಟ್ಟಿದವರು ಚತುರ್ವರ್ಣ ಬಾಹ್ಯರಾಗುವರಷ್ಟೆ ಇದನ್ನು ಯಾವ ಮಾಧ್ವರು ಹೇಳದಿದ್ದರೂ ಪ್ರಾಯಃ ಮಾ-ಮಂಜರೀಕಾರನೇ ತಿಳಿದುಕೊಂಡು ಸಿಟ್ಟಿಗೆ ಕಟ್ಟುಬಿದ್ದು ಈ ಕೆಟ್ಟ ತರ್ಜುಮೆಯ ಮಾಡ ಹೊರಟಿರಬೇಕೆಂದು ಊಹಿಸಿ ಈ ವಿಷಯ ನಿಲ್ಲಿಸೋಣ.

## ವೈಭವಕಾರರ ಕಟುಮಾತು

ಶಂಕರಾಚಾರ್ಯರಂತೆ ಮಧ್ವಾಚಾರ್ಯರಿಗೂ ಸಹ ಗುದವ್ರಣದ ರೋಗ ಉಂಟಾಯಿ ೨ತೆಂದು ಮಾ-ಮಂಕಾರ ಹೇಳಿದ್ದು ವೈಭವಕಾರರ ತಾಳ್ಮೆಯನ್ನು ಕೆಡಿಸುವಂಥಾ ಮಾತಾಗಿದೆ. ''ತತ್ಕ್ವೇದಮುಪಲಬ್ಧಂ ಮೃತ್ಪಿಂಡಬುದ್ಧಿನಾ । ಸ್ವಕಪೋಲಕಲ್ಪಿತಪುರಾಣಂ ಚ ನ ಪ್ರದರ್ಶಿತಮ್'' ..... ಎಂದು ವೈಭವಕಾರರು ಇಲ್ಲಿ ತಮ್ಮ ಆಕ್ರೋಶವನ್ನು ಸೂಚಿಸುವ ಮಾತಾಡಿದ್ದು ಸಹಜವಾಗಿದೆ. ದ್ವೇಷಾಸೂಯದ ಆವಿಷ್ಕಾರಕ್ಕೂ ಮಿತಿಯಿಲ್ಲದಂತೆ ವರ್ತಿಸುವ ಈ ಮಾ-ಮಂ ಕಾರನ ಬಗ್ಗೆ ಇಲ್ಲಿ ವೈಭವಕಾರರು ಕಟುವಾಗಿ ಮಾತಾಡುವರೀತಿ ಶ್ರೀಹರಿಪ್ರೀತಿಯ ದಾರಿಯು.

## ಶಂಕರ - ಮಧ್ವರಲ್ಲಿ ಒಂದು ಪ್ರಮುಖ ಅಂತರ

ಮಣಿಮಂಜರಿಯ ಶಂಕರರಿಗು - ಮಾ-ಮಂಜರಿಯ ಮಧ್ವರಿಗೂ ಎಲ್ಲ ರೀತಿಯ ಸಾಮ್ಯತೆ ಇಷ್ಟಾದರೂ ಉಂಟಾಗಿಲ್ಲ. ವಿಶ್ವರೂಪನ ಹೆಂಡತಿಯೊಡನೆ ಶಂಕರರ ಕಾಮಸಮರ ಮಣಿಮಂಜರಿಯಲ್ಲಿ ಬಂದಂತೆ, ಈ ಮಾ-ಮಂಜರಿ ಮಧ್ವರ ಬಗ್ಗೆ ಏನೂ ಹೇಳಲಾಗದೆ, ''ವಕ್ತುಂ ವಯಂ ಸಂಪ್ರತಿ ನ ಪ್ರವೀಣಾಃ'' ಎಂದು, ಏಕೆ ಮುಗಿದು ಹೋಯಿತೆಂದು ಕೆಲವು ಸ್ನೇಹಿತರಾದ ಶಾಸ್ತ್ರಿಗಳು ಕೇಳಿದರು ಏನು ಹೇಳಬೇಕೆಂದು ತೋಚುತ್ತಿಲ್ಲ. ಮಾ-ಮಂಕಾರನು ಮುಂದಿನ ಮುದ್ರಣದಲ್ಲಿ ಇದಕ್ಕೆ ಉತ್ತರಿಸಬಹುದೆಂದು ಹೇಳೋಣವೆ?

ಇದರಿಂದ ಐತಿಹಾಸಿಕ ಪ್ರಜ್ಞೆಯಿಲ್ಲದೆ ಮಾತಾಡುವಾಗ ಆಗುವ ಮಾತಿನ ಶೈಲಿ ಈ ಹಿಂದಿನ ವಿಚಾರಗಳಿಂದ ವಿದಿತವಾಗುವುದೆಂದು ತಿಳಿದು, ಮಾ-ಮಂಜರಿಯ ತೃತೀಯಸರ್ಗದಲ್ಲಿ ಬಂದ ಮಧ್ವಾಚಾರ್ಯರ ವಿಕೃತ ಚಿತ್ರಣಕ್ಕೆ ಯಾವ ಬೆಲೆಯೂ ಇಲ್ಲವೆಂದು ನಿರ್ಧರಿಸಬೇಕು.

## ಚತುರ್ಥ ಸರ್ಗ ವಿಮರ್ಶೆ

ಮಾ-ಮಂಜರಿಯ ಈ ನಾಲ್ಕನೇ ಸರ್ಗದಲ್ಲಿ, ವಿದ್ಯಾರಣ್ಯರನ್ನು ವೈಭವೀಕರಿಸುವ ಚರಿತ್ರೆಯ ಪ್ರಸ್ತಾಪ ಉದ್ದೇಶ್ಯವಾಗಿದೆ. ವಿದ್ಯಾರಣ್ಯರಿಗೆ ಅಕ್ಷೋಭ್ಯತೀರ್ಥರಿಂದ ಉಂಟಾದ ಪರಾಜಯ ಇದಕ್ಕೆ ತೊಡಕಾಗಿದೆ. ಆದ್ದರಿಂದ ಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು

ಸೋಲಿಸುವ ಕಥೆಯೇ ನಡೆದಿಲ್ಲವೆಂದು ಒಂದು ದುರ್ವಾದವಾದರೆ, ವಿದ್ಯಾರಣ್ಯರೇ ಅಕ್ಷೋಭ್ಯತೀರ್ಥರನ್ನು ಸೋಲಿಸಿದರೆಂದು ಇನ್ನೊಂದು ದುರ್ವಾದವಿದೆ. ಇವೆರಡನ್ನೂ ಐತಿಹಾಸಿಕ ಪ್ರಜ್ಞೆಯಿಂದ ವಿಮರ್ಶಿಸುವ ಸಮಯ ಈಗ ಮತ್ತೊಮ್ಮೆ ಆವಶ್ಯಕವಾಗಿ ತೋರುತ್ತಿದೆ.

## ಮಧ್ವಾಚಾರ್ಯರ ಕಾಲ

ಅಕ್ಷೋಭ್ಯತೀರ್ಥರು ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು. ಅಕ್ಷೋಭ್ಯತೀರ್ಥರ ಶಿಷ್ಯರಾದ ಟೀಕಾಚಾರ್ಯರು, ತಮ್ಮನ್ನು ಶ್ರೀಮಧ್ವಾಚಾರ್ಯರ 'ಪ್ರಗುಣ' ಎಂದು (ಪ್ರಶಿಷ್ಯನೆಂದು) ಹೇಳಿಕೊಂಡಿದ್ದಾರಷ್ಟೆ ಆದ್ದರಿಂದ ಇಲ್ಲಿ ಅಕ್ಷೋಭ್ಯತೀರ್ಥರ ವಿಚಾರಕ್ಕೆ ಆಚಾರ್ಯರ ಕಾಲನಿರ್ಣಯ ಪ್ರಮುಖವಾಗಿದೆ. ಆಚಾರ್ಯರೇ ಸ್ವತಃ ತಮ್ಮ ಅವತಾರದ ಕಾಲವನ್ನು 4300 ಕಲಿವರ್ಷ ಕಳೆದ ನಂತರವೆಂದು ಹೇಳಿದ್ದಾರೆ.

ಚತುಃಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ ॥
ಜಾತಃ ಪುನರ್ವಿಪ್ರತನುಃ ಸ ಭೀಮೋ ದೈತ್ಯೈರ್ನಿಗೂಢಂ ಹರಿತತ್ವಮಾಹ ॥

ಎಂದು ಆಚಾರ್ಯವಾಕ್ಯವು. ಇದರಿಂದ 4219ರಲ್ಲಿ ಮಧ್ವಾವತಾರವೆಂದು ಹೇಳುವ ಮಾ–ಮಂಜರೀ ಉಪೇಕ್ಷೆಗೆ ಅರ್ಹವಾಗುತ್ತದೆ. 4300 ಕಳೆದ ಕೂಡಲೆ ಯಾವಾಗ? ಎಂದು ಪ್ರಶ್ನೆ ಬಂದರೆ ಆ ಕೂಡಲೆ ಎಂದು ಒಂದು ವಾದವಾದರೆ, ಅಲ್ಲಿಂದ ಮುಂದೆ 39 ವರ್ಷಗಳಾದ ನಂತರ ಬರುವ ವಿಳಂಬಿ ಸಂವತ್ಸರವೆಂದು ಇನ್ನೊಂದು ವಾದ. ಇದರಲ್ಲಿ ಎರಡನೆಯ ವಾದ ಅಣುಮಧ್ವಚರಿತ ಆಧಾರಿತವಾದರೆ, ಮೊದಲನೆಯದು ಕೈಫಿಯತ್ತನ್ನು ಆಧರಿಸಿದೆ. ಇವೆರಡರಲ್ಲಿ ಅಣುಮಧ್ವಚರಿತೆಯ ಪ್ರಾಚೀನತೆ, ಎರಡನೆಯ ವಾದವನ್ನೇ ಹೆಚ್ಚು ನಂಬಲು ಅನುಕೂಲವಾಗಿದೆ. ಇದರಿಂದ ಕ್ರಿ.ಶ. 1239 ರಿಂದ ಕ್ರಿ.ಶ. 1317 ರವರೆಗೆ ಶ್ರೀಮದಾಚಾರ್ಯರ ಕಾಲವೆಂದು ನಿರ್ಣಯವಾಗುತ್ತದೆ.

## ನರಹರಿತೀರ್ಥರ ಶಿಲಾಶಾಸನ

ಕ್ರಿ.ಶ. 1264 ರಿಂದ ಕ್ರಿ.ಶ. 1293ರ ವರೆಗಿನ ಕಾಲದಲ್ಲಿ ಶ್ರೀಮದಾಚಾರ್ಯರ ಶಿಷ್ಯರಾದ ಶ್ರೀ ನರಹರಿತೀರ್ಥರ ಬಗ್ಗೆ ಶಿಲಾಶಾಸನಗಳ ಉಲ್ಲೇಖವಿದೆ. ಅದರಲ್ಲಿ 1281ರ ಶಿಲಾಶಾಸನದಲ್ಲಿ ಶ್ರೀಮಧ್ವಾಚಾರ್ಯರು ಜೀವಂತರಾಗಿ ಇದ್ದರೆಂದು ಗುರುತಿಸುವ ಬಿ.ಎನ್.ಕೆ. ಶರ್ಮಾರವರ ವಾದದ ಪ್ರಕಾರ 1239–1317 ಎಂಬ ಆಚಾರ್ಯರ ಕಾಲಮಾನವೇ ಸರಿಯೆನಿಸುತ್ತದೆ. ಹೀಗೆ ಇದು ಬಹುಜನರ ವಿಮರ್ಶೆಗೆ ಸಮ್ಮತವಾದ ಸಂಗತಿಯು.

## ಅಕ್ಷೋಭ್ಯತೀರ್ಥರ ಕಾಲ

ಈ ಹಿನ್ನೆಲೆಯಲ್ಲಿ ವಿಚಾರಮಾಡಿದಾಗ ಶ್ರೀಮದಾಚಾರ್ಯರ ನಂತರ ಪದ್ಮನಾಭ

ತೀರ್ಥರು ಕ್ರಿ.ಶ. 1325ರವರೆಗೆ ನಂತರ 1333ರ ವರೆಗೆ ನರಹರಿತೀರ್ಥರು ನಂತರ 1350 ರವರೆಗೆ ಮಾಧವತೀರ್ಥರು, ನಂತರ 1365ರ ವರೆಗೆ ಅಕ್ಷೋಭ್ಯತೀರ್ಥರು ಪೀಠಾಧಿಪತ್ಯ ವಹಿಸಿರವುದನ್ನು ಮನಗಾಣಬೇಕು. ಇದು ಪರಂಪರಾ ಸಿದ್ಧವಾದ ಕಾಲವೂ ಆಗಿದೆ. ಕ್ರಿ.ಶ. 1337ಕ್ಕೆ ಸಂಬಂಧಪಟ್ಟ ಕನ್ನಡ ಶಿಲಾಶಾಸನದಿಂದ ಅಕ್ಷೋಭ್ಯತೀರ್ಥರ ಉಲ್ಲೇಖವಿರುವುದೆಂದು ಬಿ.ಎನ್.ಕೆ. ಶರ್ಮಾರವರ ಪ್ರಬಂಧದಿಂದ ತಿಳಿಯುತ್ತದೆ. ಆದ್ದರಿಂದ ಕ್ರಿ.ಶ. 1337 ಸಮಯದಲ್ಲಿ ಅಕ್ಷೋಭ್ಯತೀರ್ಥರು ಇದ್ದರೆಂಬುದು ನಿರ್ವಿವಾದವು.

## ವಿದ್ಯಾರಣ್ಯರ ಕಾಲ

ಮಾ-ಮಂಜರಿಯು ಶಾಲಿ ಕ್ರಿ.ಶ. 1150 (ಕ್ರಿ 1227) ರಿಂದ 1308 (ಕ್ರಿ. 1385) ರವರೆಗೆ ವಿದ್ಯಾರಣ್ಯರ ಕಾಲವೆಂದು ಹೇಳುತ್ತದೆ. ವಿದ್ಯಾರಣ್ಯರ ಈ 158 ವರ್ಷಗಳ ಜೀವನ ಅಸಂಭಾವಿತವಿಚಾರವಾಗಿದೆ. ಐತಿಹಾಸಿಕವಾಗಿ ವಿದ್ಯಾರಣ್ಯರ ಕಾಲವನ್ನು ವಿಮರ್ಶಿಸುವ ವಿಚಾರಕ್ಕೆ ಇದು ವಿರುದ್ಧವಾಗಿದೆ. ಇತಿಹಾಸ ಸಂಶೋಧಕರ ಪ್ರಕಾರ ಕ್ರಿ. 1266 ರಿಂದ 1386 (ಒಟ್ಟು 120 ವರ್ಷ) ವಿದ್ಯಾರಣ್ಯ ಜೀವಿತವೆಂದು ಹೇಳಲಾಗಿದೆ. ಅದೇ ಕಾಲದಲ್ಲೇ ಕ್ರಿ. 1268 ರಿಂದ 1369 ರವರೆಗೆ ವೇದಾಂತದೇಶಿಕರ ಸಮಯವೆಂದು ಹೇಳಲಾಗುತ್ತದೆ. ಮಧ್ವಾಚಾರ್ಯರ ಅವತಾರ ಸಮಾಪ್ತಿ ಸಮಯದಲ್ಲಿ ಈರ್ವರೂ ಪ್ರಾಯಃ 50 ವರ್ಷದವರಾಗುತ್ತಾರೆ. ಇದರಿಂದ, ಮಧ್ವಾಚಾರ್ಯರಿಂದ ಶಿಥಿಲವಾದ ಅದ್ವೈತ ಸ್ಥಾಪನೆಗೆ ಶಂಕರರೇ ಪುನಃ ವಿದ್ಯಾರಣ್ಯರಾಗಿ ಬಂದರೆಂಬ ಮಾ-ಮಂಜರೀ ಹರಟೆಯು ಅರ್ಥಹೀನವೆಂದು ಸ್ಪಷ್ಟವು.

## ಮಧ್ವಾಚಾರ್ಯರ ಪ್ರಭಾವ

ಈ ಇಬ್ಬರಲ್ಲಿ ವೇದಾಂತದೇಶಿಕರು ವೈಷ್ಣವಮತಪ್ರವರ್ತಕರಾದ ಶ್ರೀಮದಾಚಾರ್ಯರ ಬಗ್ಗೆ ಗೌರವವನ್ನೇ ಹೊಂದಿದ್ದರಿಂದ ವಯೋಮಾನದಿಂದ ಅಲ್ಪರಾದ್ದರಿಂದಲೂ, ಮಧ್ವಾ ಚಾರ್ಯರ ಜೊತೆ ವಾದಿಸುವ ಪ್ರಮೇಯ ಬಂದಿರಲಿಕ್ಕಿಲ್ಲ. ಅದ್ವೈತವನ್ನೇ ಪ್ರಬಲವಾಗಿ ಖಂಡಿಸು ತ್ತಿದ್ದ ಆಚಾರ್ಯರನ್ನು ವಿದ್ಯಾರಣ್ಯರೂ ಸಹ ಎರಡು ಕಾರಣದಿಂದ ಎದುರಿಸಲಿಲ್ಲವೆಂದು ತಿಳಿಯ ಬಹುದು. ರಾಜ್ಯಸಂಘಟನೆಗಾಗಿ ಎಲ್ಲರಿಗೂ ಬೇಕಾದವನಾಗಬೇಕೆಂದು ಬಯಸುವ ವಿದ್ಯಾರಣ್ಯ ರಿಗೆ ಆಗ ಈ ವಾದ-ವಿವಾದಗಳ ಬಗ್ಗೆ ಒಲವು ಇರಲಿಲ್ಲವೆಂದೆನಿಸುತ್ತದೆ. ಇದಲ್ಲದೆ, ವಿದ್ಯಾರಣ್ಯರ ಗುರುಗಳು ಅಥವಾ ಪರಮಗುರುಗಳಾದ 'ವಿದ್ಯಾಶಂಕರ' ಎಂಬ ಯತಿಗಳನ್ನು ವಾದದಲ್ಲಿ ಬಗ್ಗುಬಡಿದ ಶ್ರೀಮದಾಚಾರ್ಯರ ಎದುರಿಗೆ ಬರಲು ವಿದ್ಯಾರಣ್ಯ ಹೆದರಿದರೆಂದೂ ಊಹಿಸ ಬಹುದು. ಮಧ್ವಾಚಾರ್ಯರ ಈ ಪ್ರಭಾವವನ್ನೇ ಪಂಡಿತಾಚಾರ್ಯರು ವಾಯುಸ್ತುತಿಯಲ್ಲಿ

ಆಕ್ರೋಶಂತೋ ನಿರಾಶಾ ಭಯಭರವಿವಶಸ್ವಾಶಯಾ ಛಿನ್ನದರ್ಪಾ
ವಾಶಂತೋ ದೇಶನಾಶಸ್ತ್ವಿತಿ ಬತ ಕುಧಿಯಾಂ ನಾಶಮಾಶಾದಿಶಾಸು ॥

ಧಾವಂತೋऽಶ್ಲೀಲಶೀಲಾ ವಿತಥಶಪಥಶಾಪಾ ಶಿವಾ ಶಾಂತಶೌರ್ಯಾಃ
ತ್ವದ್ವ್ಯಾಖ್ಯಾಸಿಂಹನಾದೇ ಸಪದಿ ದದೃಶಿರೇ ಮಾಯಿಗೋಮಾಯವಸ್ತೇ ॥

ಎಂದು ವರ್ಣಿಸಿದ್ದಾಗಿ ತಿಳಿಯಬಹುದು.

## ವಿದ್ಯಾರಣ್ಯರಿಗೂ ಅಕ್ಷೋಭ್ಯತೀರ್ಥರಿಗೂ ವಾದ

ಆದ್ದರಿಂದ ಮಧ್ವಾಚಾರ್ಯರ ಕಾಲದಲ್ಲಿ ವಿದ್ಯಾರಣ್ಯರು ಅದ್ವೈತಸಮರ್ಥನೆಗೆ ಹೆಚ್ಚು ಒಲವು ತೋರದೆ, ರಾಜಕೀಯವಾಗಿ ಉನ್ನತ ಸ್ಥಾನಗಳಿಸುವ ರೀತಿಯಲ್ಲೇ ಬಾಳಿದ್ದಾರೆ. ಇದರಂತೆ ಪದ್ಮನಾಭತೀರ್ಥರು ನರಹರಿತೀರ್ಥರು 1336 ರ ವಿಜಯನಗರ ಸಾಮ್ರಾಜ್ಯದ ಪ್ರತಿಷ್ಠಾ ಸಮಯದ ಪೂರ್ವದಲ್ಲಿ ಇದ್ದುದರಿಂದ, ಆಗ ವಿದ್ಯಾರಣ್ಯರಿಗೆ ರಾಜ್ಯಸ್ಥಾಪನೆಗಯೇ ಗುರಿ ಆಗಿದ್ದರಿಂದ ಇವರೊಡನೆ ವಾದವು ನಡೆದಿರಲಾರದು. ಮಾಧವತೀರ್ಥರು ಉತ್ತರದೇಶ ಸಂಚಾರದಲ್ಲಿ ನಿರತರಾಗಿ ಇತ್ತ ಹೆಚ್ಚು ಕಾಲ ಇರಲಿಲ್ಲವೆಂದು, ವಿದ್ಯಾರಣ್ಯರಿಗೆ ಅಕ್ಷೋಭ್ಯತೀರ್ಥರ ಜೊತೆಯೇ ವಾದವಾಗಿರುವುದು ಉಚಿತವೆನಿಸುತ್ತದೆ.

## ವಿದ್ಯಾರಣ್ಯ ಎಂಬ ಹೆಸರು ಯಾವಾಗ ಬಂತು?

ವಿದ್ಯಾರಣ್ಯರೆಂಬುದು ಸನ್ಯಾಸವಾದ ಬಳಿಕ ಬಂದ ಹೆಸರು. ಪೂರ್ವದಲ್ಲಿ ಅವರು ಮಾಧವಾಚಾರ್ಯರೆನಿಸಿದ್ದರೆಂಬುದು ಬಹು ಜನರ ವಾದ. ಈ ಮಾಧವಾಚಾರ್ಯರು ಅಕ್ಷೋಭ್ಯತೀರ್ಥರು ಬೃಂದಾವನಸ್ಥರಾದ 1365ರ ನಂತರ 1377ರಲ್ಲಿ ಕ್ರಮಸನ್ನಾಸ ಸ್ವೀಕರಿಸಿ ವಿದ್ಯಾರಣ್ಯ ಎನಿಸಿದರು. ಆದ್ದರಿಂದ ಅಕ್ಷೋಭ್ಯತೀರ್ಥರ ಕಾಲದಲ್ಲಿ ವಿದ್ಯಾರಣ್ಯರೆಂಬ ಹೆಸರಿನ ವ್ಯಕ್ತಿಯೇ ಇಲ್ಲ. ಅವರನ್ನು ಅಕ್ಷೋಭ್ಯತೀರ್ಥರು ಸೋಲಿಸಿದ ಘಟನೆ ಇತ್ಯಾದಿಗಳೆಲ್ಲ ನೈಜವಲ್ಲವೆಂದು ಕೆಲವರ ವಾದ. ಆದರೆ ಇದು ಸರಿಯಲ್ಲ.

> ''ಮಾಧವಾಚಾರ್ಯರು ಸನ್ಯಾಸಾಶ್ರಮಕ್ಕೆ ಬಂದು ವಿದ್ಯಾರಣ್ಯರೆಂಬ ಹೆಸರು
> ಪಡೆದುದು ಕ್ರಿ.ಶ. 1331 ರಲ್ಲಿ ಎಂದರೆ ತಮ್ಮ 63-64ನೆಯ
> ವರ್ಷದಲ್ಲಿ - ಎಂದು ಶೃಂಗೇರಿಯ ಮಠದ ಪಟ್ಟಿಕೆಯಿಂದ ಗೊತ್ತಾಗುತ್ತದೆ.''

ಎಂದು ಡಿ.ವಿ.ಜಿ. ಯವರು, ಶೃಂಗೇರಿಯ ಮಠದ ಪಟ್ಟಿಕೆ ಉದಾಹರಿಸಿರುವುದನ್ನು ಕಂಡಾಗ ಮಾಧವಾಚಾರ್ಯರು ಅಕ್ಷೋಭ್ಯತೀರ್ಥರ ಕಾಲದಲ್ಲಿ ವಿದ್ಯಾರಣ್ಯರೆಂದಾಗಿರುವುದು ನಿರ್ವಿವಾದವು.

ಕ್ರಿ.ಶ. 1336 ಶಿಲಾಶಾಸನದಲ್ಲಿ ವಿಜಯನಗರಪ್ರತಿಷ್ಠಾಪನೆಯನ್ನು ತಿಳಿಸುವಾಗ ''ಸಪ್ತಮ್ಯಾಂ ಶ್ರೀ ವಿಜಯನಗರಂ ನಿರ್ಮಮೇ ನಿರ್ಮಮೇಂದ್ರಃ'' ಎಂಬಲ್ಲಿ ''ನಿರ್ಮಮೇಂದ್ರಃ = ಸನ್ಯಾಸೀ'' ಎಂಬುದಾಗಿ ವಿದ್ಯಾರಣ್ಯರಿಗೆ ಸನ್ಯಾಸವಾಗಿರುವುದು ಗೊತ್ತಾಗುತ್ತದೆ.

ಕ್ರಿ.ಶ. 1344 ರ ಮುಳಬಾಗಿಲು ತಾಲ್ಲೂಕಿನ ಶಾಸನವು :-

ವಿದ್ಯಾಭಿಧಾನ ನಗರೀ ವಿಜಯೋನ್ನತಿಶಾಲಿನೀ।
ವಿದ್ಯಾರಣ್ಯ ಕೃತಾ ತಸ್ಯಾಂ ರತ್ನಸಿಂಹಾಸನೇ ಸ್ಥಿತಃ॥

ಎಂದು 1344 ರಲ್ಲೇ ವಿದ್ಯಾರಣ್ಯರು ಇದ್ದುದನ್ನು ಸಮರ್ಥಿಸುತ್ತದೆ. ಆದ್ದರಿಂದ ವಿದ್ಯಾರಣ್ಯರಿಗೂ ಅಕ್ಷೋಭ್ಯತೀರ್ಥರಿಗೂ ವಾದನಡೆದಿರುವುದು ಸತ್ಯ ಸಂಗತಿಯು.

## ವೈಭವದ ಒಂದು ವಿಚಾರ

ಇಲ್ಲಿ ಈ ವೈಭವ ಗ್ರಂಥ ಒಂದು ಅಮೂಲ್ಯ ವಿಚಾರವನ್ನು ಪ್ರತಿಪಾದಿಸುತ್ತಿದೆ. ಶೈವ ಮಾರ್ಗಾವಲಂಭಿಯಾದ ಹರಿಹರರಾಯನೆಂಬ ಒಬ್ಬ ವ್ಯಕ್ತಿಯನ್ನು ಹಿಡಿದು ವಿದ್ಯಾರಣ್ಯರು ವಿಜಯನಗರ ಸ್ಥಾಪಿಸುವ ಪೂರ್ವದಲ್ಲಿ ಈ ಹಂಪೆಯಲ್ಲಿ ಯಾವ ರಾಜ್ಯವೂ ಇಲ್ಲವೆಂದು ತಿಳಿಯಲಾಗದು. ಹೊಯ್ಸಳಾದಿ ರಾಜವಂಶ ಚರಿತೆ ನೋಡಿದಾಗ ಅದಕ್ಕೆ ಪೂರ್ವದಲ್ಲಿಯೂ ಸಹ ಅಲ್ಲಿ ರಾಜ್ಯವಿತ್ತೆಂದು ಗೊತ್ತಾಗುತ್ತದೆ. ಆ ರಾಜನು ಮಳಖೇಡದ ಮಾಂಡಲೀಕ ರಘುನಾಥ ರಾಯನ ಸಂಬಂಧಿಯೋ ಗೆಳೆಯನೋ ಆದ ವೈಷ್ಣವನೇ ಆಗಿರಬೇಕು. ಅವನು ಮಧ್ವಾ ಚಾರ್ಯರ ಪರಮಾನುಗ್ರಹ ಪಾತ್ರನಾಗಿ ರಾಜ್ಯಪಾಲಿಸುವನಾಗಿರಬೇಕು. ಆದ್ದರಿಂದಲೇ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಪದ್ಮನಾಭತೀರ್ಥರು ತಮ್ಮ ಅಂತಿಮಕಾಲವನ್ನು ಹಂಪೆಯಲ್ಲೇ ಕಳೆದು ವೃಂದಾವನಸ್ಥರಾದುದು ಸಂಗತವಾಗುತ್ತದೆ. ಪದ್ಮನಾಭತೀರ್ಥರಿಗೆ "ಯಃ ಕರ್ನಾಟಕ ಪೂರ್ವ ಸಜ್ಜನಗುರುಃ" ಎಂದು ದೇಶವಿಶೇಷದ ಹಿನ್ನೆಲೆಯಿಂದ ಗುರುತ್ವವನ್ನು ಹೇಳುವ ಸಂಪ್ರದಾಯಪದ್ಧತಿಯ ಮಾತು ಅರ್ಥವತ್ತಾಗುತ್ತದೆ. ಸಂಪ್ರದಾಯಪದ್ಧತಿಯು ಶ್ರೀಮದಾಚಾರ್ಯರ ನೇರ ಶಿಷ್ಯರಾದ ಶ್ರೀಹೃಷೀಕೇಶತೀರ್ಥರ ಕೃತಿಯು. ಆದ್ದರಿಂದ ಆ ಕಾಲ ದಲ್ಲೇ ಪದ್ಮನಾಭತೀರ್ಥರಿಗೆ ಹಂಪೆಯಲ್ಲಿ ವಿಶೇಷವಾದ ಗುರುಸ್ಥಾನವಿತ್ತೆಂದು ಊಹಿಸಬಹುದು. ಅದು ಪದ್ಮನಾಭತೀರ್ಥರ ನಂತರ ನರಹರಿತೀರ್ಥರಿಗೂ ಮುಂದೊರೆದಿರಬೇಕು. ಆದ್ದರಿಂದಲೇ ನರಹರಿತೀರ್ಥರೂ ಅಲ್ಲೇ ವೃಂದಾವನಸ್ಥರಾಗಿರುವ ಸಂಗತಿ ಸರಿಯೆನಿಸುತ್ತದೆ. ರಾಜಶಾಸನದ ಮರ್ಮಜ್ಞರಾದ ನರಹರಿತೀರ್ಥರಿರುವವರೆಗೆ ಅಲ್ಲಿ ವೈಷ್ಣವರಾಜರೇ ಆಳಿರುತ್ತಾರೆ. 1333ರಲ್ಲಿ ನರಹರಿತೀರ್ಥರು ಗತಿಸಿದ ನಂತರ, 1336ರಲ್ಲಿ ವಿದ್ಯಾರಣ್ಯರ ನಿಯಂತ್ರಣದಲ್ಲಿ ಹಂಪೆ ಸಿಕ್ಕಿಹೋಗಿದೆ. ಆ ಸಮಯದಲ್ಲಿ ಉತ್ತರದೇಶಸಂಚಾರದಲ್ಲಿ ಇದ್ದ ಮಾಧವತೀರ್ಥರು ಮತ್ತೆ ಹಂಪೆಯತ್ತ ಬರುವುದರಲ್ಲಿಯೇ ಭೀಮಾನದೀ ತೀರದಲ್ಲಿ ಮಣೂರಿನಲ್ಲಿ ಅವರು ವೃಂದಾವನಸ್ಥ ರಾಗಿ, ಹಂಪೆಗೂ ವೈಷ್ಣವಯತಿಗಳಿಗೂ ಇದ್ದ ನಂಟು ನಿಂತಂತಾಗಿದೆ. ಅದನ್ನು ಪುನಃ ಉಜ್ಜೀವನಗೊಳಿಸಬೇಕಾದರೆ, ಶೈವ ವಿದ್ಯಾರಣ್ಯರ ವಿಜಯ ಆವಶ್ಯಕವೆಂದು, ಅಕ್ಷೋಭ್ಯ ತೀರ್ಥರು ಮುಳುಬಾಗಿಲು ರಾಜನ ಸಹಾಯದಿಂದ ವಿದ್ಯಾರಣ್ಯರ ಜೊತೆ ವಾದವನ್ನು ನಡೆಸಿ ಗೆದ್ದಿರುವರೆಂದು ಇತಿಹಾಸವನ್ನು ವಿಶ್ಲೇಷಿಸಬೇಕು. ಆದ್ದರಿಂದಲೇ ಮುಂದೆ ವ್ಯಾಸರಾಜರೂ ಸಹ

ದೈವಾನುಗ್ರಹದಿಂದ ಪ್ರಾಪ್ತವಾದ ವಿಜಯನಗರದ ಆಧಿಪತ್ಯ ಪಡೆದು ರಾಜ್ಯಾಧಿಕಾರದಿಂದ ಶೈವ ಪ್ರಾಬಲ್ಯ ಉಂಟಾಗದಂತೆ ಕಾರ್ಯ ನಿರ್ವಹಿಸಿದರೆಂದು, ಈ ಹಿನ್ನೆಲೆಯಿಂದ ಗಮನಿಸಬೇಕಾಗಿದೆ.

ಮುಳುಬಾಗಿಲಿನಲ್ಲಿ ಅಕ್ಷೋಭ್ಯತೀರ್ಥರು ಅಂಗಾರ ನರಸಿಂಹದೇವರನ್ನು ಪ್ರತಿಷ್ಠಾಪಿಸಿದ್ದಾರೆ. ಆದ್ದರಿಂದ ಶ್ರೀಪಾದರಾಜರ ನಂತರವೇ ಮುಳುಬಾಗಿಲು ವಿದ್ಯಾಕೇಂದ್ರವಾಗಿ ಪ್ರಾಶಸ್ತ್ಯಗಳಿಸಿತೆಂಬ ವಾದ ಅರ್ಥಹೀನ. ತತಃ ಪೂರ್ವದಲ್ಲಿಯೇ ನರಸಿಂಹೋಪಾಸಕರಾಗಿ ಅಲ್ಲಿ ಮಧ್ವಸಿದ್ಧಾಂತಪ್ರತಿಷ್ಠಾಪಕರಾಗಿ ಅಕ್ಷೋಭ್ಯತೀರ್ಥರು ನೆಲೆಸಿದ್ದರಿಂದ ಮುಳುಬಾಗಿಲಿಗೆ ಮೊದಲಿನಿಂದಲೂ ಪ್ರಾಶಸ್ತ್ಯವಿದೆಯೆಂದು ತಿಳಿಯಬಹುದು. ಈ ಇತಿಹಾಸ ಕಾಲಗರ್ಭದಲ್ಲಿ ಲೀನವಾದ ಸಂಗತಿಯೆಂದು ವೈಭವಕಾರರು ಹೊಸ ವಿಚಾರವೊಂದನ್ನು ಇಲ್ಲಿ ಸಂಶೋಧಕರ ಮುಂದೆ ಇಟ್ಟಿರುವುದು ಸಂತಸದ ಸಂಗತಿಯು. ಇದರಿಂದ ಮಾ-ಮಂಜರಿಯಂತೆ ಈ ವೈಭವಗ್ರಂಥ ಅಭಿಮಾನ ಮೂಲಕವಲ್ಲವೆಂದು ತಿಳಿಯುವುದೂ ಸರಿಯಾಗುತ್ತದೆ.

## ವಿದ್ಯಾರಣ್ಯಪರಾಜಯದ ದಾಖಲೆಗಳು

ಹೀಗೆ ವಿದ್ಯಾರಣ್ಯರಿಗೂ ಅಕ್ಷೋಭ್ಯತೀರ್ಥರಿಗೂ ವಾದ ನಡೆದುದು ಪ್ರಾಮಾಣಿಕ ವಾದ್ದರಿಂದ ವಿದ್ಯಾರಣ್ಯ ಪರಾಜಯವನ್ನು ಅನೇಕ ಕೃತಿಕಾರರು ದಾಖಲಿಸಿರುತ್ತಾರೆ.

1. ಟೀಕಾಚಾರ್ಯರು : ದುರ್ವಾದಿವಾರಣವಿದಾರಣದಕ್ಷದೀಕ್ಷಂ ಅಕ್ಷೋಭ್ಯತೀರ್ಥ ಮೃಗರಾಜಮಹಂ ನಮಾಮಿ ॥ ಎಂದು ಸೂಚ್ಯವಾಗಿ ಹೇಳಿರುತ್ತಾರೆ.
2. ದೃಢಾಸಿನಾ ತತ್ತ್ವಮಸೀತಿ ವಾಚಾ ಸಾಮರ್ಥ್ಯಭಾಜಾ ಪರಜೀವಭೇದೇ ॥<br>ಅವೈದಿಕಾಗ್ರ್ಯಂ ಮುನಿರೇಷ ವಿದ್ಯಾರಣ್ಯಂ ಶರಣ್ಯಂ ಕುದೃಶಾಂ ಬಿಭೇದ ॥<br>(ರಾಘವೇಂದ್ರ ವಿಜಯ)
3. ಯೋ ವಿದ್ಯಾರಣ್ಯವಿಪಿನಂ ತತ್ತ್ವಮಸ್ಯಸಿನಾಚ್ಛಿನತ್ ।<br>ಶ್ರೀಮದಕ್ಷೋಭ್ಯತೀರ್ಥಾಯ ನಮಸ್ತಸ್ಮೈ ಮಹಾತ್ಮನೇ ॥
4. ಅಕ್ಷೋಭ್ಯತೀರ್ಥಯತಿರಾಡಲೈರಭೇದ್ಯೋ ದುರ್ವಾದಿವಾರಣ ವಿದಾರಣಕೇಸರೀಂದ್ರಃ ।<br>ಸತತ್ತ್ವಮಸ್ಯಭಿಧವಾಗಸಿನಾ ಸ್ಮ ವಿದ್ಯಾರಣ್ಯಂ ಛಿನತ್ತಿ ಪರಜೀವವಿಭೇದಿನಾ ತಂ ॥<br>(ಛಲಾರೀಯ ಜಯತೀರ್ಥವಿಜಯ)
5. ಅಕ್ಷೋಭ್ಯತೀರ್ಥಃ ಪರಜೀವಭೇದಿನಾ ಸುತತ್ತ್ವಮಸ್ಯಾಹ್ವಯದಾರುಣಾಸಿನಾ ॥<br>ಕದಾಗಮಧ್ವಾಂತನಿಬದ್ಧವಿದ್ಯಾರಣ್ಯಂ ಮಹಾರಣ್ಯಮನೇಕಧಾಚ್ಛಿನತ್
6. ಅಕ್ಷೋಭ್ಯತೀರ್ಥೋಽಪಿ ವಿಜಿತ್ಯ ವಾದಿನಂ ಕೀರ್ತಿಂ ಹರೇಃ ಸುಪ್ರತತಾಂ ವಿಧಾಯ ॥<br>ಸ್ತಂಭಂ ಪ್ರತಿಷ್ಠಾಪ್ಯ ಜಯಾಂಕಮಶ್ಮನಃ ತತೋ ಯಯೌ ಭೀಮರಥೀತಟಂ ಸಃ ॥<br>(ವ್ಯಾಸತೀರ್ಥೀಯ ಜಯತೀರ್ಥವಿಜಯ)

7. ತತ್ತ್ವವಾದಿಯಾದ ಅಕ್ಷೋಭ್ಯಮುನಿಕ್ಕುಂ ಮಾಯಾವಾದಿಯಾದ ವಿದ್ಯಾರಣ್ಯನಿಕ್ಕುಂ ವೇದಾಂತತ್ತಿಲ್ ವಾದಂ ಪ್ರವೃತ್ತಮಾಹ । ಇವರೋಹಳೊಡೆಯ ಅಭಿಪ್ರಾಯತ್ತಿಯಂ ರಾಜಪತ್ರಿಕಾಮೂಲಮಾಹ । ವೇದಾಂತದೇಶಿಕರ ಸನ್ನಿಧಕ್ಕೆ ಅನುಧವ್ವೈ । ಯಥಾರ್ಥತ್ತೈ ಅರಿಂದುಹರಕ್ಕು ವೇಣುಮನ್ನು ಅನುಪ್ಪಮೈಕ್ಕ ವೇದಾಂತದೇಶಿಕರ್ :-

ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ ।
ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥
ಇತಿ ಪದ್ಯೇನ ವಿದ್ಯೋತಯಾಮಾಸ ।

(ಬ್ರಹ್ಮ ತಂತ್ರ ಸ್ವತಂತ್ರಜೀಯರ್ (1394-1406) ಗುರುಪರಂಪರಾಪ್ರಭಾವಾಖ್ಯ ವಿಶಿಷ್ಟಾದ್ವೈತಗ್ರಂಥೇ)

8. ತತ್ತ್ವಮಸಿನಾಽಸಿನಾ ತಂ ವಿದ್ಯಾರಣ್ಯಂ ಮುನಿಸ್ತದಾಕ್ಷೋಭ್ಯಃ ।
ಅಚ್ಛಿನದಿತ್ಯವದದ್ಯಸ್ತಂ ಸೇವೇ ತತ್ತ್ವ ನಿರ್ಣಯೇ ಚತುರಮ್ ॥
(ದೊಡ್ಡಯಾಚಾರ್ಯಕೃತ ವೇದಾಂತದೇಶಿಕವೈಭವ)

9. ಅಥ ಕದಾಚಿದಖಿಳ ಬುಧಜನರಂಜನ ಮಂಜುಳವಿಲಸಿತ ನಿರ್ವಾಪಿತ ಗೀರ್ವಾಣಗುರು ಗರ್ವಾಂಕುರಸ್ಯ ವಿವಿಧಗುಣಶೇವಧೇಃ ವಿಜಯನಗರಪತೇರಾಸ್ಥಾನೇ ವಿದ್ಯಾರಣ್ಯೇನ ಸಮಂ ಅಕ್ಷೋಭ್ಯಮುನೇರ್ಮಾಧ್ವಮತಾದ್ವನ್ಯಮೂರ್ಧನ್ಯಸ್ಯ ತತ್ತ್ವಮಸೀತಿ ವಾಕ್ಯೇ ತರಂಗಿತವದಾವದಾಮೋದಃ ಪ್ರಾದುರಾಸೀತ್ । ತದಾ ಸಮುದಿತಾ ಚಿಂತಾ ತಸ್ಯ ರಾಜಶಿರೋಮಣೇಃ । ತತ್ತ್ವನಿರ್ಣಯೇ ದಕ್ಷಸ್ತಟಸ್ಥಃ ಕೋ ಭವೇದಿತಿ ।

ಪ್ರಸಕ್ತೇ ಯುವಯೋರ್ವಾದೇ ಪ್ರಾಕ್ತನೋಕ್ತಿವಿದಾಂ ವರಮ್ ।
ಮಾನ್ಯಂ ವೇಂಕಟನಾಥಾರ್ಯಂ ಮಧ್ಯಸ್ಥಂ ಮನುತೇ ಮನಃ ॥

ಅಥ ಪತ್ರೇಷು ಲಿಖಿತಾಮನಯೋರ್ಯುಕ್ತಿಸಂತತಿಮ್ ।
ದರ್ಶಯಂತಿ ಸ್ಮ ಗುರವೇ ರಾಜ್ಞಾ ಕೇಚನ ಚೋದಿತಾಃ ॥

ಸ ಚ ಕರ್ಮಬ್ರಹ್ಮಮೀಮಾಂಸಯೋಃ ಮರ್ಮವೇದೀ ಕವಿಕಥಕಪಂಚಾನನಾಚಾರ್ಯೋ ಮಹತಾ ಮಹೀಭೃತಾ ಪ್ರೇರಿತೈರ್ಮನೀಷಿಭಿಃ ಆಹೃತಂ ಅಕ್ಷೋಭ್ಯ ಮುನೇರ್ವಿದ್ಯಾರಣ್ಯಸ್ಯ ಚ ವಚನನಿಚಯಂ ವಿಚಾರ್ಯ, ಹಂತ ಕಶ್ಚನ ಕರಬದರಕಲ್ಪಮಪಿ ಜೀವ ಪರಯೋರ್ಭೇದಮಪಲಪತಿ ಪ್ರಲಪತಿ ಚ ವಿಯದಂಬುಜವಿಡಂಬನ ಧುರಂಧರಾಮಪಿ ತಯೋರಭೇದತಾತ್ತ್ವಿಕತ್ವಮಿತಿ ತರ್ಕಯನ್ ಜಯಾಪಜಯೌ ತತ್ಕ್ಷಣವಿರಚಿತೇನ

ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ ।
ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥

ಇತಿ ಪದ್ಯೇನ ವಿದ್ಯೋತಯಾಮಾಸ।

ವಾಣೀಮಾದಾಯ ತಾಂ ಸೂರೇಃ ಕ್ಷೋಣೀಪರಿವೃಢಪ್ರಿಯಾಃ ॥

ಶಿರಸಾ ಕ್ಲಪ್ತನತಯಃ ತರಸಾ ತಾಂ ಪುರೀಂ ಯಯುಃ ॥

ಅಥ ವಸುಧಾತಲಜಿದಾಚಾರ್ಯಸವಿಧಾತ್ ಆಯಾತೈಃ ತೈಃ ವಿನಿವೇದಿತಂ ಕಥಾಹವ ಜಯಾಪಜಯಸೂಚಕಂ ಕರ್ಣೇಜಪಂ ಶ್ಲೋಕಮಾಕರ್ಣ್ಯ ಜೃಂಭಿತಹರ್ಷಃ ಸ್ತಂಭಿತವಿಪಕ್ಷಪಕ್ಷ ಅಕ್ಷೋಭ್ಯಮುನಿಂ ಮಧ್ಯೇಸಭಂ ಭೃಶಂ ಶಶಂಸ ॥

(ಕವಿತಾರ್ಕಿಕಸಿಂಹ ವೇದಾಂತಚಾರ್ಯಕೃತ ವೇದಾಂತದೇಶಿಕಾಚಾರ್ಯ ವಿಜಯಚಂಪೂ)

ಹೀಗೆ ವಿದ್ಯಾರಣ್ಯರನ್ನು ಅಕ್ಷೋಭ್ಯತೀರ್ಥರು ಸೋಲಿಸಿದ ಘಟನೆ ಪ್ರಾಮಾಣಿಕವೇ ಆಗಿರುತ್ತದೆ. ಇದು 300 ವರ್ಷದ ನಂತರ ಭಲಾರೀಯಾದಿ ಗ್ರಂಥಗಳಿಂದ ಹುಟ್ಟಿದ ವಿಚಾರ ವೆಂದು, ಜಯತೀರ್ಥರ ಶಿಷ್ಯರಾದ ವ್ಯಾಸತೀರ್ಥರು ರಚಿಸಿದ ಜಯತೀರ್ಥವಿಜಯದಲ್ಲಿಲ್ಲ ವೆಂದು ಕೆಲವರು ವಾದಿಸುವರಿದ್ದಾರೆ. ಆದರೆ ಅಣು ಜಯತೀರ್ಥವಿಜಯದಲ್ಲಿ ಅಕ್ಷೋಭ್ಯ ತೀರ್ಥರ ಈ ವಿಚಾರ ದಾಖಲಿಸುವ ಸನ್ನಿವೇಶ ಆವಶ್ಯಕವಾಗಿರದಿದ್ದರಿಂದ, ಸಂಕ್ಷೇಪದಿಂದ ಅಕ್ಷೋಭ್ಯತೀರ್ಥರ ಉಲ್ಲೇಖಕ್ಕೆ ಅದು ಸೀಮಿತವಾದ್ದರಿಂದ, ಈ ವಿದ್ಯಾರಣ್ಯಪರಾಜಯ ಘಟನೆ 300 ವರ್ಷಗಳ ನಂತರ ಹುಟ್ಟಿರುವುದಿಲ್ಲ. ವ್ಯಾಸತೀರ್ಥಕೃತ ಜಯತೀರ್ಥವಿಜಯದಲ್ಲಿಯೂ ಈ ಘಟನೆ ಉಲ್ಲೇಕಗೊಂಡಿದೆ. ಭಲಾರೀಯಕ್ಕಿಂತಲೂ ಇದು ಪ್ರಾಚೀನವಾಗಿದೆ. ಇದು ವ್ಯಾಸತೀರ್ಥ ರದಲ್ಲವೆಂಬ ವಾದ ನಿರಾಧಾರ. ಪ್ರಾಚೀನ ಹಸ್ತಪ್ರತಿಯೊಂದರಲ್ಲಿ "ಶ್ರೀ ಶ್ರೀ ವ್ಯಾಸರಾಜ ಗುರೂಣಾಮಂತೇವಾಸಿನಾ ಶ್ರೀಮತ್ಕೂಡಲೀ ಆರ್ಯ ಅಕ್ಷೋಭ್ಯತೀರ್ಥಸಂಸ್ಥಾನಾಧೀಶೇನ ಶ್ರೀನಾರಾಯಣಯತಿನಾ ಮುಳುಬಾಗಿಲು ಗ್ರಾಮೇ ಶ್ರೀಶ್ರೀಶ್ರೀ ಜಯಸ್ತಂಭಸನ್ನಿಧೌ ಲಿಖಿತಮ್" ಎಂದು ಬರೆದು ನಂತರ "ಅಸಿನಾ ತತ್ವಮಸಿನಾ" ಎಂಬ ಈ ಪದ್ಯವು ಲಿಖಿತವಾಗಿದೆಯಾದ್ದರಿಂದ ಈ ಪದ್ಯ ಹಾಗು ಜಯಸ್ತಂಭಗಳೆಲ್ಲ ಚಾರಿತ್ರಿಕ ಸತ್ಯವಾಗಿವೆ. ಇದಲ್ಲದೆ ಮುನ್ನೂರು ವರ್ಷಗಳ ನಂತರ ಕಲ್ಪಿತವೇ ಆಗಿದ್ದಲ್ಲಿ, ಆಗಲೇ ಅದು ನಿರಾಕೃತವಾಗುತ್ತಿತ್ತು. ಹಾಗೆ ಅದು ಯಾರಿಂದಲೂ ಆ ಕಾಲಲ್ಲಿ ನಿರಾಕೃತವಾಗದೇ ಎಲ್ಲರಿಂದಲೂ ಒಪ್ಪಿತವಾದ್ದರಿಂದ ನಿರ್ವಿವಾದ ಸಂಗತಿಯು. ಎಲ್ಲರೂ ಒಪ್ಪಿರುವುದು ಅನೇಕ ಗ್ರಂಥಗಳ ಉಲ್ಲೇಖದಿಂದ ವೇದ್ಯವಾಗಿದೆ.

ಇದರಂತೆ, ವಿದ್ಯಾರಣ್ಯರ ಪರಂಪರೆಯಲ್ಲಿ ಬಂದವರೆಲ್ಲರನ್ನೂ ವಿದ್ಯಾರಣ್ಯರೆಂದೇ ಕರೆಯುವುದರಿಂದ ಮೂಲವಿದ್ಯಾರಣ್ಯರಿಂದ ಹೊರತಾದ ಬೇರೆ ವಿದ್ಯಾರಣ್ಯರನ್ನು ಅಕ್ಷೋಭ್ಯ ತೀರ್ಥರು ಸೋಲಿಸಿರಬೇಕೆಂಬ ವಾದವು, ಕೂಸು ಹುಟ್ಟದೆ ಕುಲಾವಿ ಹೊಲೆದಂತಾಗುತ್ತದೆ. ಮೂಲವಿದ್ಯಾರಣ್ಯನ ಕಾಲಕ್ಕಿಂತ ಪೂರ್ವಲ್ಲಿ ಅಕ್ಷೋಭ್ಯತೀರ್ಥರಿದ್ದರೆಂದು ವಾದಿಸುವ ಈ ಮಂದಿ ಮುಂದಿನ ವಿದ್ಯಾರಣ್ಯರನ್ನು ಸೋಲಿಸಿದರೆಂದು ಹೇಳುವುದು ಹಾಸ್ಯಾಸ್ಪದವಷ್ಟೆ ಆದ್ದರಿಂದ ಈ ತರಹದ ಸತ್ವಹೀನ ವಿಮರ್ಶೆಗೆ ಏನೂ ಬೆಲೆಯಿಲ್ಲ. ವಿದ್ಯಾರಣ್ಯರನ್ನು ಅಕ್ಷೋಭ್ಯತೀರ್ಥರು

ಸೋಲಿಸಿದರೆಂದು ಒಪ್ಪಿದರೆ ಮಾಧ್ವ-ಸ್ಮಾರ್ತರಲ್ಲಿ ವೈಷಮ್ಯವಾಗುವುದೆಂದು ಹೆದರಿ ಸುಳ್ಳು ವಿಷಯವನ್ನು ಸಮರ್ಥಿಸುವುದು ತಪ್ಪಾಗುತ್ತದೆ. ಬೌದ್ಧಿಕರಂಗದ ಹಣಾಹಣಿಯು ಬಾಹ್ಯ ವೈಷಮ್ಯಕ್ಕೆ ಎಂದಿಗೂ ಕಾರಣವಲ್ಲವಷ್ಟೆ

## ವಿದ್ಯಾರಣ್ಯಪರಾಜಯ ನಿರ್ಣಯಿಸುವ ವಾಕ್ಯಾರ್ಥ

ಈ ವೈಭವಗ್ರಂಥದಲ್ಲಿ ಅಕ್ಷೋಭ್ಯತೀರ್ಥರಿಗೂ – ವಿದ್ಯಾರಣ್ಯರಿಗೂ ವಾಕ್ಯಾರ್ಥ ನಡೆದ ವಿಷಯದ ಸಂಗ್ರಹವಿದೆ. ಇದು ಮಾ-ಮಂಜರೀ ಕಲ್ಪಿತ ವಾಕ್ಯಾರ್ಥಸರಣಿಗೆ ಉತ್ತರರೂಪವಾಗಿ ವೈಭವಕಾರರು ಊಹಿಸಿ ಬರೆದ ವಾಕ್ಯಾರ್ಥಸಂಗ್ರಹರೂಪವಾಗಿದೆ. ಇದನ್ನು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಇದರಲ್ಲಿ, ಶ್ರೀಹರಿಯ ಸರ್ವೋತ್ತಮತೆ, ಪುರಾಣಗಳಲ್ಲಿ ತಾಮಸಾದಿವಿಭಾಗ ಸಮರ್ಥನೆ, ಮಧ್ವಾಚಾರ್ಯರ ಭಾಷ್ಯದಲ್ಲಿ ತಾಮಸಪುರಾಣದ ಉದಾಹರಣೆಯ ಆಂತರ್ಯ, ಪರವಾದಿಗಳು ಹೇಳುವ ತಾಮಸಾದಿಶಬ್ದಾರ್ಥಗಳ ನಿರಾಕರಣೆ, ವೈಷ್ಣವ ಪುರಾಣಗಳಿಗೆ ಸಾತ್ವಿಕತ್ವದ ನಿರೂಪಣೆ, ಭಾರತಾದಿಗಳಿಂದ ಶಿವಸರ್ವೋತ್ತಮತೆ ಸಮರ್ಥಿಸಲಾಗದೆಂದು ಪ್ರತಿಪಾದನೆ, ಪುರಾಣಕರ್ತೃತ್ವ ಶಿವನಲ್ಲಿ ಇಲ್ಲವೆಂದು ಸಮರ್ಥನೆ, ತಪ್ತಮುದ್ರಾಧಾರಣ ಸಮರ್ಥನೆ, ಅದ್ವೈತ ಅಪ್ರಾಮಾಣಿಕತೆಯ ನಿರೂಪಣೆಗಾಗಿ 'ತತ್ವಮಸಿ' ವಾಕ್ಯಾರ್ಥ ವಿಚಾರ, ಉಲ್ಲೇಖದೊಡನೆ ಈ ವೈಭವದ ಭಾಗವು ಉಪಸಂಹಾರಗೊಂಡಿದೆ.

## ವೇದಾಂತದೇಶಿಕರ ನಿರ್ಣಯ

ಹೀಗೆ ಅಕ್ಷೋಭ್ಯತೀರ್ಥರಿಗೂ ವಿದ್ಯಾರಣ್ಯರಿಗೂ ಈ ವಾಕ್ಯಾರ್ಥವು ನಡೆದಾಗ, ಇಬ್ಬರಲ್ಲಿ ಯಾರು ವಿಜಯಿಗಳೆಂದು ನಿರ್ಣಯಿಸಲು ವೇದಾಂತದೇಶಿಕರ ಬಳಿ ಈ ಇಬ್ಬರ ವಿಚಾರವನ್ನು ಲೇಖಪೂರ್ವಕವಾಗಿ ಕಳುಹಿಸಿದಾಗ, ಅವರು ನಿರ್ಣಯಿಸಿದ ಶ್ಲೋಕ ಹೀಗಿದೆ :-

> ಅಸಿನಾ ತತ್ವಮಸಿನಾ ಪರಜೀವಪ್ರಭೇದಿನಾ ॥
> ವಿದ್ಯಾರಣ್ಯಂ ಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥

ಪರಮಾತ್ಮ-ಜೀವಾತ್ಮರಲ್ಲಿ ಭೇದವನ್ನು ಸಾಧಿಸುವ 'ತತ್ವಮಸಿ' ಎಂಬ ಖಡ್ಗದಿಂದ, ವಿದ್ಯಾರಣ್ಯ ಎಂಬ ದೊಡ್ಡ ಅರಣ್ಯವ(ಯೋಧನ)ನ್ನು ಅಕ್ಷೋಭ್ಯಮುನಿಗಳು ಕತ್ತರಿಸಿದರು.)

## ಮಾ-ಮಂಜರೀಕಾರನ ಕುಚೋದ್ಯ

ವಿದ್ಯಾರಣ್ಯರಿಗೂ – ಅಕ್ಷೋಭ್ಯತೀರ್ಥರಿಗು ವಾದವೇ ನಡೆದಿಲ್ಲವೆಂದು ವಾದಿಸುವ ಪರವಾದಿಯು, ಅದನ್ನು ಸಾಧಿಸಲಾಗದಿದ್ದಾಗ, ವೇದಾಂತದೇಶಿಕರ ಈ ನಿರ್ಣಯ : ವಿದ್ಯಾರಣ್ಯರು ಅಕ್ಷೋಭ್ಯತೀರ್ಥರನ್ನು ಜಯಿಸಿದರೆಂದೇ ತಿಳಿಸುವುದೆಂದು ನಿರೂಪಿಸಿ ಈ ಪದ್ಯಕ್ಕೆ ಕುಚೋದ್ಯದ ಅರ್ಥ ಮಾಡಿದ್ದಾನೆ. ಅದು ಹೇಗೆಂದರೆ :-

